# ಸೊಹ್ರಾಬ್ ಮತ್ತು ರುಸ್ತುಂ

ಕ. ನರಸಿಂಹಶಾಸ್ತ್ರಿ



ಕಾವ್ಯಾಲಯ : : ಪ್ರಕಾಶಕರು
ಮೈಸೂರು

ಮೊದಲ ಮುದ್ರಣ : ೧೯೪೨
ಎರಡನೆಯ ಮುದ್ರಣ : ೧೯೫೫





**ಬೆಲೆ : ೧೨ ಆಣೆಗಳು**

ಮುದ್ರಕರು

ಜಿ. ಎಚ್. ರಾಮರಾವ್, ಬಿ. ಎಸ್‌ಸಿ.,
ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್, ಮೈಸೂರು.
ಮೈಸೂರು

# ನಿವೇದನ

ತಾಯೆ, ಕನ್ನಡ ನುಡಿಯೆ, ನಿನ್ನ ಸೇವೆಗೆ ಬರುವ
ಕುಸುಮರಾಶಿಗಳೊಳಗೆ ಈ ಸುಮವನುಂ ಬೆರಸು.
ರೂಪದೊಳು ಗಂಧದೊಳು ಮಿಗಿಲೆನಿಪ ಹೂವುಗಳ
ನಡುವೆ ಚಿರಕಾಲವಿದು ನಿನ್ನೆದೆಯ ಮೇಲಿರಲಿ.
ಜಾಜಿ ಮಲ್ಲಿಗೆ ಸುರಗಿ ಸಂಪಗೆಯ ನಡುನಡುವೆ
ಕಾಡು ಹೂಗಳನಿವನು ಕೋದು ನೀ ಸರಮಾಡು.
ಮಮತೆಯಿಂದರ್ಚಿಸಲು ಘನತೆಗೊಂಡಿಹ ನೀನು
ಎಂದೆಂದು ಬಿಡಲಾರೆ. ಬಿಡಬೇಡ, ಬಿಡಬೇಡ,
ಬಿಡಲು ಬೇಡ.

# ಅರಿಕೆ

ಭರತಭೂಮಿಗೆ, ಕನ್ನಡನಾಡಿಗೆ "ರುಸ್ತುಂ"ನ ಹೆಸರು ಹೊಸದಲ್ಲ. ಮೀಸೆ ತಿರುಗುವಾಗ "ರುಸ್ತುಂ" ಎಂದುಕೊಂಡರೆ ಕಣ್ಣುಗಳು ಕೆದರುತ್ತವೆ: ಕೈಗಳು ಅದಿರುತ್ತವೆ. ವೀರಾಸನವನ್ನು ಹಚ್ಚಿ ಭುಜಗಳನ್ನು ಹೊಡೆದು ಕೊಳ್ಳುವಾಗ "ರು–ಸ್ತುಂ" ಎಂದುಕೊಂಡರೆ ಅದೊಂದು ಬಗೆಯ ಸಾಹಸವು ಉಕ್ಕೇರುತ್ತದೆ. ಆ ಹುರುಪಿನ ಮುಂದೆ ಹುರುಪಿಲ್ಲ. ಜಗಜಟ್ಟಿಗಳ ಸಾಹಸದ ಬೀಜಾಕ್ಷರ 'ರು–ಸ್ತುಂ'

ರುಸ್ತುಂ ಇರಾನಿನ (ಪಾರ್ಶಿಸ್ತಾನ) ಪ್ರಖ್ಯಾತವೀರನೂ, ಸೈಸ್ತಾನದ ಪ್ರಭುವೂ ಆಗಿದ್ದನು. ಇವನು ನಿಂತಲ್ಲಿ ಪರಪಕ್ಷಕ್ಕೆ ಎಂದೂ ಜಯವಿರುತ್ತಿರಲಿಲ್ಲ. ಈ ಅಸಮ ವೀರನಿಗೆ ಅವನ ಜೀವನದ ಅಂತ್ಯಕಾಲದಲ್ಲಿ ವಿಶ್ವವೇ ಎಂದೆಂದೂ ಮರುಗಬೇಕಾಗಿರುವಂತಹ ಒಂದು ದುರ್ಘಟನೆ ಒದಗಿ ಬಂತು; ಆಗ ಮಗನೆಂಬ ಅರಿವೇ ಇಲ್ಲದೆ ಪ್ರಖ್ಯಾತವೀರನಾದ ಸೊಹ್ರಾಬ್ ಎಂಬ ತನ್ನ ಮಗನನ್ನೆ ತಾನು ಕೊಂದುಹಾಕಿ ಬಿಡುತ್ತಾನೆ. ಕೇವಲ ಕರುಣಾಜನಕವಾದ ಈ ಕಥೆಯನ್ನು ಮುಂದಿನ ಕೆಲವು ಪಂಕ್ತಿಗಳಲ್ಲಿ ವಿವರಿಸಿರುತ್ತೇನೆ.

ರುಸ್ತುಮನ ಜೀವ ಜೀವಾಳವೂ, ಸೊಹ್ರಾಬನ ಶೌರ್ಯ ಸಾಹಸಗಳೂ, ತಾಹಮಿನೆಯ ಅನಿರ್ವಚನೀಯವಾದ ತಾಯ್ತನವೂ ಕಂದು ಕುಂದಿಲ್ಲದಂತ ಚಿತ್ರಿಸಲ್ಪಟ್ಟಿದ್ದರೆ ನನ್ನ ಪ್ರಯತ್ನ ಸಾರ್ಥಕ.

**ತೀರ್ಥಹಳ್ಳಿ,**
ತಾ. 23–12–32

**ಕ. ನರಸಿಂಹಶಾಸ್ತ್ರಿ**

# ಎರಡನೆಯ ಮುದ್ರಣದ ಮುನ್ನುಡಿ

ಆಂಗ್ಲ ಸಾಹಿತ್ಯದ ಒಂದು ಆಣಿ ಮುತ್ತಿನಂತಿರುವ ಮ್ಯಾಥ್ಯು ಆರ್ನಾಲ್ಡರ 'ಸೊಹ್ರಾಬ್ ರುಸ್ತುಂ' ಕವನದ ಪ್ರೇರಣೆ ಈ ಕಾವ್ಯಕ್ಕೆ ಕಾರಣ. ಅದರ ಅನೇಕಾಂಶಗಳನ್ನು ಪಡೆದಿದ್ದರೂ ಇದು ಭಾಷಾಂತರವಲ್ಲ. 'ಷಾನಾಮ'ದ ರೀತಿಯಲ್ಲಿ ಕ್ರಮವಾಗಿ ಕಥೆ ಸಾಗುತ್ತದೆ. ಆವಶ್ಯಕತೆಯನ್ನು ಗಮನಿಸಿ ಬಹು ಸ್ವಲ್ಪ ವ್ಯತ್ಯಾಸ ಮಾಡಿಕೊಂಡಿದೆ. ಅದು ಗಣನೆಗೆ ಬರುವಂಥದಲ್ಲ.

ಕಾಲು ಶತಮಾನದ ಮೊದಲು, ಕನ್ನಡದ ಭಾವಗೀತೆಗಳ ಆವಿರ್ಭವ ಕಾಲದಲ್ಲಿ, ಇದು ರಚಿತವಾಗಿ ೧೯೩೨ರಲ್ಲಿ ಪ್ರಥಮತಃ ಪ್ರಕಟವಾಯಿತು. ಆಗ ಮದ್ರಾಸ್ 'ಕ್ರಿಶ್ಚಿಯನ್ ಲಿಟರೇಚರ್ ಸಂಘ'ದವರಿಂದ ಬಹುಮಾನ ದೊರೆಯಿತು. ಬೊಂಬಾಯಿ ಮೈಸೂರು ಪ್ರಾಂತಗಳಲ್ಲಿ ಪುಸ್ತಕಭಂಡಾರಗಳಿಗೂ, ಇದರ ಭಾಗವು ಪಠ್ಯಪುಸ್ತಕಕ್ಕೂ, ಅಂಗೀಕೃತವಾಗಿ ಗೌರವಿಸಲ್ಪಟ್ಟಿತು. ಇದಕ್ಕಾಗಿ ಆ ಸಂಸ್ಥೆಗಳವರಿಗೆ ಕೃತಜ್ಞನಾಗಿದ್ದೇನೆ.

ಮಾಧ್ಯಮಿಕ ಮತ್ತು ಪ್ರೌಢಶಾಲೆಯ ತರಗತಿಗಳಲ್ಲಿ ಇದನ್ನೋದಿದಾಗ ಪ್ರತಿಸಲವೂ ವಿದ್ಯಾರ್ಥಿಗಳು ಭಾವಪರವಶರಾಗಿ ಕಣ್ಣೀರು ಕರೆದುದನ್ನು ಕಂಡಿದ್ದೇನೆ. ಇದು ಎಲ್ಲದಕ್ಕಿಂತಲೂ ಹೆಚ್ಚಿನ ಪ್ರಶಸ್ತಿ.

ಇದರ ಪ್ರತಿಗಳು ಬಹು ಹಿಂದೆಯೇ ಮುಗಿದಿವೆ.

ಕುಮಾರ ವಯಸ್ಸಿನ ಬಾಲಕರ ಭಾವಾನುಭಾವಗಳಿಗೆ ಉತ್ತೇಜಕವಾಗಿ ಅವರ ಶೌರ್ಯಸಾಹಸಗಳನ್ನು ಉದ್ದೀಪನಗೊಳಿಸಲು ಇದರ ಪಠನ ಪಾಠನ ನೆರವಾಗುವುದೆಂಬ ಉದ್ದೇಶದಿಂದ ಪುನರ್ಮುದ್ರಣ ಹೊರಬಿದ್ದಿದೆ.

ಕರ್ಣಾಟಕದ ಸುಪ್ರಸಿದ್ಧ ಪ್ರಕಾಶಕರಾದ ಮಿತ್ರ ಶ್ರೀ ಕೂಡಲಿ ಚಿದಂಬರಂ ಅವರು ಈ ಸಲದ ಪ್ರಕಟನ ಕಾರ್ಯವನ್ನು ಕೈಕೊಂಡಿದ್ದಾರೆ. ಅವರಿಗೆ ಅಭಿವಂದನೆ.

ಸ್ವಾತಂತ್ರ್ಯೋತ್ಸವದಿನ, 1955
ಮೈಸೂರು

ಇಂತು
**ಕ. ನರಸಿಂಹಶಾಸ್ತ್ರಿ**

# ಸೊಹ್ರಾಬ್ ಮತ್ತು ರುಸ್ತುಂ

## ಪ್ರಥಮ ಪರಿಚ್ಛೇದ

### ೧

ಒಂದು ದಿನ ರುಸ್ತುಮನು ರಾಕುಷನನೇರುತ್ತ
ಬೇಟೆಯಾಡಲು ಹೊರಟು ಕಾಡುಗಳನಲೆದಲೆದು
ನಾಡ ಎಲ್ಲೆಯ ದಾಟಿ ದೂರದೇಶವ ಸೇರಿ
ನೆಗೆನೆಗೆದು ಓಡುತ್ತ ಬಳಲಿಯುಬ್ಬಸಬಿಡುವ
ಕುದುರೆಯಿಂ ಕೆಳಗಿಳಿದು ಮೈದಡವಿ ಮೆಲುಕಿಟ್ಟು
ಅಡುಗೆವೂಟವ ತಾನು ಮುಗಿಸಿದನು. ಮೈಮರೆದು
ಮಲಗಿದನು ಮರದ ಕೆಳಗೆ.

ವೀರನಿವನಾದರ್ಶವೀರನಯ್—ರುಸ್ತುಮೆನೆ
ಹಾರಿಬಿದ್ದೋಡುವರು ಕದಿಯ ಬಂದಿರುವವರು.
ದೂರಕ್ಕೆ ನಾರುವ್ರುವು ಕ್ರೂರಕೃತ್ಯಗಳೆಲ್ಲ.
ಬಾರವೈ ಹತ್ತಿರಕೆ ಹಿಂಸೆಯನ್ಯಾಯಗಳು. ೧೦
ಯಾರಿವನ ವರ್ಣಿಪರು? ಈ ಹೆಸರ ಹೇಳುವುದೆ
ರಕ್ಷೆಯಾಗಿದ್ದಿತಾಗ.

ಅಂದು ತಾ ತುರಗವದು ಗರಿಕೆಯನು ಕಡಿಯುವುದು.
ಸುತ್ತಿನಲಿ ಮೇಯುವುದು; ಮತ್ತೆ ನಿಂದೀಕ್ಷಿಪುದು.
ಹೊಳ್ಳೆಗಳನರಳಿಸುತ, ತುಟಿಗಳನು ನಡುಗಿಸುತ,
ಒಮ್ಮೆ ಹೂಂಕರಿಸುತ್ತ, ಮಲಗಿಹನ ಪರಿಕಿಪುದು;
ಮತ್ತೊಮ್ಮೆ ಸಾಗುವುದು, ಹೀಗೆ ಮುಂದೈದಿದುದು
ಹಸುರನ್ನು ಹುಡುಕುತ್ತಲಿ.

ಅಲ್ಲಿ ತಿರುಗಾಡುತಿಹ ಕೆಲವು ಜನ ತಾರ್ತರರು
ಸಲ್ಲಲಿತ ಲಕ್ಷಣದ ವಾಜಿಯನು ನೋಡಿದರು.
ಹತ್ತಿರದೊಳಿನ್ನಾರು ಕಾಣದಿರೆ, ಹಿಡಿದೆಳೆದು
ಸೆಳೆದೊಯ್ದರಾಗಳಿದು ಘುಡುಘುಡಿಸಿ ಹೂಂಕರಿಸಿ ೨೦
ಕೆರಳುತ್ತ, ಕಿರಚುತ್ತ, ತಡೆತಡೆದು ನೋಡುತ್ತ
ಹೋಯ್ತವರ ಹಿಂದೆಡೆಯೊಳು.

ಎದ್ದು ಕಣ್ಬಿಟ್ಟಲ್ಲಿ ತುರಗಮಂ ಕಾಣದೆಯೆ,
ಹೆಸರಿಟ್ಟು ಕೂಗುತ್ತ, ಹೊದರುಗಳ ಹುಡುಕುತ್ತ,
ದನಿಯಾಗಲಾಲಿಸುತ, ದಿಕ್ಕುಗಳ ನೋಡುತ್ತ
ಸಾರಿ ಬೇಗನೆ ನಡೆದು, ಹತ್ತಿರಿಹ ಪಟ್ಟಣಕೆ
ರುಸ್ತುಮನು ಬರುತಿರ್ದನು.

ಆ ಪುರದ ಪ್ರಭುವಿದನು ದೂರದಿಂದಲೆ ತಿಳಿದು,
ಕುದುರೆಯನು ತಂದವರ ನಿಂದಿಸುತ ತಾ ಹೊರಟು,
ಊರೊಳಗೆ ಬರುತಿಹನ ಮನ್ನಣೆಯೊಳಿದಿರ್ಗೊಂಡು,
ಕೋಪವನು ತಿಳುಹುತ್ತ "ತಪ್ಪಿಹೋದುದು ಜನವು.
ತುರಗಮಂ ತರಿಸುವೆನು. ಖಾತಿಗೊಳ್ಳದೆಯೆನ್ನ ೩೦
ಅರಮನೆಗೆ ಬರಬೇಕು. ಇರಬೇಕು." ಎಂದೆನಲು
ಆಗಲೆನ್ನುತಲೊಪ್ಪಿ ಪ್ರಭುವಿನಾದರದಲ್ಲಿ
ವೀರನಿರುತಿರ್ದನಾಗ.

ಷಡುರಸಾನ್ನವ ಸವಿದು, ಮಧುವ ಮಿತಿಯಿಂ ಕುಡಿದು,
ಹಾಡುಗಳ ಕೇಳುತ್ತ, ನರ್ತನವ ನೋಡುತ್ತ,
ಪುರಜನರ ಸತ್ಕರಿಸಿ, ಪರಿಜನರನಾದರಿಸಿ,
ವೈಭವದೊಳಿರುವಲ್ಲಿ, ಮೂಡಲಿನ ದೆಸೆಯಲ್ಲಿ
ರುಸ್ತುಮನ ಶಾಂತತೆಯ ಬಿತ್ತರಿಪುದೆಂಬಂತೆ,
ಶೀತಕರನುದಿಸಿದನು. ಕಿರಣಗಳ ಹರಹಿದನು.
ಹಾಲಹೊಯ್ದಂತೆಲ್ಲ ದಿಕ್ಕುಗಳು ಬೆಳಗಿದುವು.
ಭುವನ ಮೋಹಕಮಾದ ಬೆಳ್ದಿಂಗಳಿಂತಿರಲು, ೪೦

ಮೇಲಿನಿಂದುದುರುತಿಹ ಹನಿಗಳಿಗೆ ಹೂವುಗಳ
ಸೌರಭವ ಸೇರಿಸುತ, ಅದನು ತಾನೆರಚುತ್ತ,
ಉಪವನದ ಲತೆಗಳನು ಬಾಗಿಸುತ, ಬಳುಕಿಸುತ,
ಮರದೆಲೆಯ ನಡುನಡುವೆ ನರಸ ವಚನವನಾಡಿ,
ಬಿದಿರುಮೆಳೆ ಮೆಳೆಯಲ್ಲಿ ಕೊಳಲ ಹಾಡನು ಹಾಡಿ,
ಎಡೆಯೆಡೆಯ ಬಿಡಬಿಡದೆ, ಮಾರುತನು ಸುಳಿದಾಡೆ,
ಬಳಲಿದ್ದ ರುಸ್ತುಮಗೆ ನಿದ್ದೆ ಬಂದಂತಾಯ್ತು.
ಕೂಡಿದ್ದ ಜನವೆಲ್ಲವಿದತಿಳಿದು ಬಯಲಾಯ್ತು,
ಮಲಗಿದನು ಧೀರನಾ ತಾಣದಲ್ಲಿ.
ಅರಮನೆಯ ಕೈದೋಟದಾಡುವೆಟ್ಟದ ಮೇಲೆ,
ಇರಿಸಿದ್ದ ಮಂಚದಲಿ, ತಳಿರುಮರದಡಿಯಲ್ಲಿ, ೫೦
ಜಗವನೆಲ್ಲವ ಮರೆತು, ಮಲಗಿಹನ ತಾ ಕುರಿತು,
ದೇವಿಯೊಬ್ಬಳು ಬಂದು, ಮಾತನಾಡಿಪಳಿಂದು
"ಹೇ ವೀರ! ರಣಧೀರ! ಬಹುಶೂರ" ಎಂದು!
ಕೇಳಿಬಲ್ಲೆನು ನಿನ್ನ. ನೋಡಿಕಾಣೆನು ವೀರ!
ಏಕೆ ಕಂಡೆನೊ ನಾನು? ಏಕೆ ಬಂದೆನೊ ಇಲ್ಲಿ?
ಇಷ್ಟುಕೆಚ್ಚಿನ ತಲೆಯು! ಇಷ್ಟು ಚೆಲ್ವಿನ ಮುಖವು!
ಧೃಷ್ಟವಾಗಿಹ ರೂಪು! ಪುಷ್ಟವಾಗಿಹ ಮೆಯ್ಯಿ!
ಹೇಳಿದಳು ಒಳಗೊಳಗೆ. ಹೇಳಲಾರಳು ಹೊರಗೆ:
"ಹೇವೀರ, ರಣಧೀರ, ಬಹುಶೂರ!" ಎಂದು.
ಹೋಗಲಾರೆನು ನಿನ್ನ ಬಿಟ್ಟು, ಎಳೆ ಮನದನ್ನ. ೬೦
ನಿನ್ನ ಸೇವಿಪ ಯೋಗ್ಯಭಾಗ್ಯವಿರುವುದೆಯೆನಗೆ?
ನಿನ್ನ ಮೆಲ್ನುಡಿಯಲ್ಲಿ ನಲ್ಲ, ಮಧುವಿದೆಯೇನು?
ನಿನ್ನ ಕಣ್ಣಿನ ಕಾಂತಿಯೊಳಗೆ ಇರುವುದೆ ಶಾಂತಿ?
ಹೇಳಿದಳು ಒಳಗೊಳಗೆ. ಹೇಳಲಾರಳು ಹೊರಗೆ:
"ಹೇವೀರ! ರಣಧೀರ! ಬಹುಶೂರ!" ಎಂದು.

ಕಾಮಿನಿಯ ಕಡೆಗಣ್ಣ ಕಡುಕಾಂತಿ ಕಾಂತನನು
ಕಣ್ಬಿಡಿಸಿತೆಂದೆನಲು, ರುಸ್ತುಮನು ಎಚ್ಚತ್ತು,
ಕಾರ್ಮೋಡ ಕುಡಿಮಿಂಚು ಚಂದ್ರ ಬೆಳ್ದಿಂಗಳುಗ–
ಳೊಂದಾಗಿ ನಿಂದಂತೆ ನಿಂದಿರುವ ತರಳೆಯನು
ನೋಡಿ, ನೀಡುಂ ನೋಡಿ, ಮುಗ್ಧೆ ನೀನಾರೆನ್ನಲು– ೭೦
"ಕ್ಷಮಿಸು ಕ್ಷಮಿಸೆಲೆ ಶೂರ, ನಿದ್ರಿಸೈ, ಹೊರಡುವೆನು.
ರಾಜಸುತೆ ತಾಹಮಿನೆ ನಾ ಹೊರಟೆ ಹೊರಡುವೆನು."
"ಆತುರವಿದೇನೆಲೌ? ಬಂದುದೇತಕೆ ರಮಣಿ?"
"ರುಸ್ತುಮನ ಕಣ್ಣಾರೆ ಕಾಣಲಾಸ್ಯೆತಂದೆ."
"ವೀರನಿವ ಸುಂದರನೆ? ಕ್ರೂರಿಯಲ್ಲವೆ? ಕಾಂತೆ!"
"ವೀರತೆಗೆ, ಸುಭಗತೆಗೆ, ಸೌಮ್ಯತೆಗೆ, ಮನೆಯಿವನು."
"ವೀರನಿವನಾದರೂ ನಿನ್ನಲ್ಲಿ ಸೋತಿಹನು."
"ರುಸ್ತುಮನು ಸೋಲುವನೆ? ಬಿನ್ನಾಣವೇತಕ್ಕೆ?
ಸೋತಿವಳ ರಕ್ಷಿಪನು. ಅಂತಾದೊಡಾಂ ಧನ್ಯೆ!
ಈ ಮೊದಲು ನನ್ನನ್ನು ಯಾರು ನೋಡಿದರಿಲ್ಲ. ೮೦
ಕೈವಿಡಿಯ ಬಂದರನು ನಾನೊಪ್ಪಿ ನಿಲಲಿಲ್ಲ.
ಕಾತರದೆ ನಿನ್ನನ್ನು ಕಾಣಲ್ಕೆ ಬಗೆದಿದ್ದೆ.
ನನ್ನ ತಂದೆಯ ವೈರಿ ಗಡಣದಲಿ ನೀನಿದ್ದೆ.
ಇಲ್ಲಿ ನಿನ್ನನು ದೈವ ತಂದು ಬಿಟ್ಟಿತು ಈಗ"–
ಎಂದು ತಲೆಯನು ಬಾಗಿ ನೆಲನ ನೋಡುತ್ತಿರಲು
ರುಸ್ತುಮನು ಕೇಳಿದನು—"ಏನೆನ್ನ ವರಿಸುವೆಯ?"
ಹೇಳಿದಳು ತಾಹಮಿನೆ—"ಹಿರಿಯರನು ಕೇಳವೆಯ?"
"ನಾಂ ಕೇಳ್ವೆ ನಿನಗಾಗಿ," ಎಂದು ರುಸ್ತುಮನೆನಲು
"ಧನ್ಯೆ ನಾನೆ"ಂದೆನುತ, ತಾಹಮಿನೆ ನಡೆದಳಾಗ.
ರುಸ್ತುಮನು ನೃಪತಿಯಂ ತಾಂ ಕಂಡು ಕುವರಿಯನು ೯೦
ಯಾಚಿಸಲು, ಮಗಳ ಸೌಭಾಗ್ಯಮಂ ಶ್ಲಾಘಿಸುತ
ಮೇಘಮಂ ಮಿಂಚು ಸೇರಿತ್ತೆನುತಲೊಪ್ಪಿದನು.

"ಆದರೇನೀ ಶಾಂತಿ ಕೊನೆಗೊಂಡು ತಾರ್ತರರು
ಪಾರ್ಶಿಕರು ಯುದ್ಧಕ್ಕೆ ನಿಂತರೆನೆ, ರುಸ್ತುಮನು
ಇಲ್ಲಿರನು. ಅಂತಾಗ ಪರಬಲದ ಶಿಬಿರಕ್ಕೆ
ಮಗಳ ನಾಂ ಕಳಿಸೆನ್ನೆ ಇದಕೇನು?" ಎಂದೆನಲು,
"ಕಾಲ ಬಂದಂತಾಗ ನಡೆಯುವೆವು. ನಾವದನು
ಗಣಿಸದೆಯೆ ಸಹಿಸುವೆವು. ನಿನ್ನ ನಿಂದಿಸೆವೆ"ಂದು
ಸತಿಪತಿಯರೊಪ್ಪಿಕೊಳಲು.–
ರುಸ್ತುಮನ ಮಾವನೆನೆ ಹೆಮ್ಮೆಯಲ್ಲವೆ ಅವಗೆ?
ಸಡಗರದಿ ನೃಪ ಮಗಳ ಮದುವೆಯಂ ಮಾಡಿದನು. ೧೦೦
ಅರಮನೆಯೊಳಿರುವಂತೆ ಅಳಿಯನನು ಬೇಡಿದನು.
ಬೇಸರವು ತೋರದಂತವನನುಪಚರಿಸಿದನು.
ದಂಪತಿಗಳುಂ ಕಳೆದರತಿಶಯದ ದಿನಗಳನು.
ಆಗಲಾ ರಾಜಸುತೆ ಗರ್ಭವಾಂತಿಹಳೆಂದು
ವಾರ್ತೆಯೂರೊಳಗಾಯ್ತು. ಹಿರಿಯರೆಲ್ಲರು ಬಂದು
"ವೀರ ಪತ್ನಿಯೆ, ವೀರ ಮಾತೆಯಾಗೆ"ಂದೆನುತ
ಹರಸಿದರು, ಹಾಡಿದರು, ನೋಡಿ ಕೊಂಡಾಡಿದರು.
ಅನಿತರೊಳು ರುಸ್ತುಮನ ಬಾಹುಗಳು ಅದಿರಲ್ಕೆ,
ಕಾಳೆಗದಿ ನಡೆದಿದ್ದ ಕಥೆಗಳನು ನೆನೆನೆನೆದು,
"ನಾರಿಯರ ನಳಿತೋಳ ತಕ್ಕೆಯೊಳು ಮೈಮರೆತು ೧೧೦
ವೀರ ನೀನಿರಲಹುದೆ? ಕೀರ್ತಿಯಿದರಿಂ ಬಹುದೆ?
ದುಷ್ಟರನು ಸಂಹರಿಸು. ರಕ್ತಧಾರೆಯ ಸುರಿಸು.
ವೀರನಾರಿಯನೊಲಿಸು. ದಿಕ್ಕಿನಲಿ ಹೆಸರುಳಿಸು."
ಎಂದು ತನ್ನೊಳು ತಾನು ತಿಳುಹಿಕೊಂಡೆಚ್ಚತ್ತು,
ಮಡದಿಯಂ ತಕ್ಕೈಸಿ ಪ್ರೇಮದಿಂ ಮುದ್ದಿಟ್ಟು
ತಂದೆ ಸಾಲನ ಕಾಯ್ದ ಗರುಡ ಪದಕವ ಕೊಟ್ಟು
"ವೀರ ಪುತ್ರನ ಪಡೆದು ಪತ್ರವನು ಕಳುಹೆ"ಂದು,
"ಕಷ್ಟ ಬಂದರೆಯೆನ್ನ ನೆನೆಯುವುದು ನೀನೆ"ಂದು

ರಾಕುಷನ ತಾ ಕರೆದು ರಂಗಾಭಿಮುಖನಾಗಿ
ಸರ್ವಸ್ವಮಂ ತೊರೆದು ಹೋದ ಕಲ್ಲಿದೆಯನಾಗಿ. ೧೨೦

೨

ತಿಂಗಳು ತುಂಬಲು ಪಡೆದಳು ಶಿಶುವ;
ಸೂರ್ಯನ ಚಂದ್ರನ ಹೋಲುತ್ತಿರುವ.
ಮಾರನನೇಳಿಪ ಮಗು ದಿನದಿನಕೆ
ಬಳೆಯುತ ಬರುತಿರೆ ಮಾತೆಯ ಮನಕೆ
ದುಃಖವೆ ಸೂಚಿತವಾಗುತ ಬಂದುದು.
ಯುದ್ಧಕೆ ಹೋಗದೆ ಇರುವುದೆ ಮಗುವಿದು?
ನಿಶ್ಚಯವೆನ್ನನು ಬಿಟ್ಟೋಡುವುದು!
ಎನ್ನೆದೆಯೊಡೆಯುವ ಸುದ್ದಿಯ ತಹುದು!
ಆಗಲಿ "ಹೆಣ್ಣನು ಹಡೆದಳು ಕಾಂತೆ.
ಅದು ತಾ ನಿರ್ಬಲವಾಗಿಹುದೆ"ಂದು ೧೩೦
ವಾರ್ತೆಯ ತಿಳಿಸೆನುತಪ್ಪಗೆ ಹೇಳಿ,
ಆಸ್ಥಿಷ್ಟೆನ್ನುತ ಧೈರ್ಯವ ತಾಳಿ,
"ಸೊಹ್ರಾಬ್" ಎನ್ನುವ ಹೆಸರನು ಇಡಿಸಿ,
ತಕ್ಸೆಗೆ 'ರುಸ್ತುಂ ಪದಕ'ವ ತೊಡಿಸಿ,
ಆಟವನಾಡುತ, ನೋಟವ ನೋಡುತ,
ನುಡಿಯನು ಕೇಳುತ, ಕೈಪರಿಗುಟ್ಟುತ,
ಕಳೆದಳು ಕಾಲವನು.
ಕಾಲವು ಕಳೆಯಲು, ವರ್ಷವು ತುಂಬಿತು.
ಎರಡೂ, ಮೂರೂ, ನಾಲ್ಕೂ ಆಯ್ತು.
ಆಟಕೆ ಕುದುರೆ, ಆಟಕೆ ಕತ್ತಿ,
ಆಟಕೆ ಯುದ್ಧ, ಆಟಕೆ ವಿಜಯ, ೧೪೦
ನೋಡುವರಾಹಾ "ರುಸ್ತುಂ!" ಎಂದರು.
"ರುಸ್ತು–ರುಸ್ತುಂ" ಮಗುವೂ ಎಂದಿತು.

"ಬೇಡ್ವೈ ಮಗುವೇ, ಹೆಸರದು ಬೇಡ.
ಕತ್ತಿಯು ಬೇಡ್ವೈ. ಕುದುರೆಯು ಬೇಡ
ಇಲ್ಲಿಯೆ ನೀನಿರು" ಎಂದಳು ತಾಯಿ
"ನೀನೇ ರಕ್ಷಕ, ಎನ್ನನು ಕಾಯಿ".
ಆರೂ, ಎಂಟೂ, ಹತ್ತೂ ಆಯ್ತು.
ಆಟಗಳೆಲ್ಲಾ ಪಾಟವೆ ಆಯ್ತು.
"ಕತ್ತಿಯ ಹಿಡಿಯುವೆ, ಕುದುರೆಯನೇರುವೆ
ಸುತ್ತಿನ ರಾಷ್ಟ್ರದ ವೀರರ ಗೆಲುವೆನು ೧೫೦
ಹೆತ್ತಿಹ ಮಾತೆಗೆ ಕೀರ್ತಿಯ ತರುವೆನು.
ರುಸ್ತುಮನೆಂಬುವನವನಾರಮ್ಮ?
ಅವನೆಂತಹನೆಲ್ಲಿಹ? ಹೇಳಮ್ಮ",
ಎನ್ನಲು ಕಥೆಯನು ಹೇಳ್ದಳು ತಾಯಿ.
"ರುಸ್ತುಂ ಹೆಸರದು ದೊಡ್ಡದು ಮಗುವೆ,
ನಮ ನಿಮಗೇತಕ್ಕದರಾ ಗೊಡವೆ?
ವೀರರ ಮಾಲೆಯ ಶೋಭಿಪ ಕಿಡಿಗಳು
ಆ ಕುಲದಿಂದಲೆ ಚಿಮ್ಮುತ ಬಂದವು.
ಅವರೊಳು ನಾಯಕ ರತ್ನವು ರುಸ್ತುಂ.
ಅವನಿಟ್ಟಡಿಯನು ಕೀಳುವನಾರೈ? ೧೬೦
ಹುಟ್ಟಿಹ ಜನದಲಿ ಅವನನು ಹಿಂದಕೆ
ಅಟ್ಟುವ ವೀರನು ಇಲ್ಲವೆ ಇಲ್ಲ.
ಗವೆಯನು ಕೊಂಡರೆ ಘಟ್ಟಿಸಿ ಬಿಡುವನು.
ಎದೆಯಲಿ ನಾಟವು ಶಸ್ತ್ರಾಸ್ತ್ರಗಳು.
ಚಲಿಸುವ ಪರ್ವತವೆಂಬೆನು ನಾನು.
ಇನ್ನಾರನು ರುಸ್ತುಂ ಹೋಲುವನು?
ಯುದ್ಧಕೆ ನಿಂತಿರಲಂಗಾಂಗಂಗಳು
ಗಿರಿಯೊಳಗಡಗಿಹ ಹುಲಿ ಸಿಂಹಗಳು.
ಶಾಂತತೆಯೊಳಗಿರೆ ಅವನಾ ಮೆಯ್ಗಳು

ಬಿಟ್ಟದೆ ಬೆಳೆದಿಹ ಹೂದೋಟಗಳು. ೧೭೦
ಅವನೆಂದೊಡೆ ಬಲು ಭಯ ನಮಗೆಲ್ಲಾ.
ನಿನಗೇತಕೆ ಮಗು ಈ ಕಥೆಯೆಲ್ಲಾ?"
ಇನ್ನೊಂದೆರಡೂ ವರುಷವು ಆಯ್ತು.
ತಾಯ್ಬಳಿಯಿರುವಾ ವೇಳೆಯು ಹೋಯ್ತು.
ಮುಷ್ಟಿಯ ಬಿಗಿಯಲು, ಪಟ್ಟನು ಹಿಡಿಯಲು,
ಗದೆಯಲಿ ಮೋದಲು, ಎದೆಯನ್ನಾನಲು,
ಈಟಿಯನಿರಿಯಲು, ಭಾಲೆಯನೆಸೆಯಲು,
ಯಾವುದರಲ್ಲಿಯು ಹಿಂದಾಗಿರನು.
ಬೇಟೆಗೆ ಎಲ್ಲರ ಮುಂದೇ ಇವನು.
ತಾಯನು ಕೇಳಿದನವನೊಂದು ದಿನ— ೧೮೦
"ಗೆಲ್ಲುವರಿಲ್ಲವೆ ಆ ರುಸ್ತುಮನ?"
"ಇಲ್ಲವು ಹುಟ್ಟಿಹ ಜನರಲಿ" ಎಂದಳು.
"ಹ್ಹೂ ಹೂಂ, ರುಸ್ತುಂ, ರುಸ್ತುಂ" ಎಂದನು.
"ಬರುವೆಯ ನಿಲ್ವೆಯ? ನೀ ಹೋರುವೆಯಾ?
ನಿನ್ನೆದೆ ಕಲ್ಲಯ್! ಎನ್ನೆದೆ ಮಿಂಚು!"
ಹಲ್ಲನು ಕಡಿಯುತ, ಅವುಡನು ಕಚ್ಚುತ,
ಕಣ್ಣನು ಕೆದರುವ, ಬಾಲನ ನೋಡಿ,
ಹೇಳ್ದಳು ಮಗನನು ತಾ ಮುದ್ದಾಡಿ.
"ಸೊಹ್ರಾಬ್ ಸಾಕಿದು. ಎನ್ನೆದೆಯೊಡೆವುದು.
ರುಸ್ತುಂ ಕೇಳ್ದರೆ ನಿನ್ನಸು ನಿಲ್ಲದು. ೧೯೦
ವೀರನು ನೀ ನಿಜ ಸಾಹಸವೇಕೈ?
ಆ ಕುಲದಿಂದಲೆ ನೀನೂ ಬಂದಿಹೆ!
ರುಸ್ತುಮನಿಂದಲೆ ಜನ್ಮವ ಪಡೆದಿಹೆ!
ಕೊರಳೊಳಗಿರುವೀ ಪದಕವ ನೋಡು!
ಅದರೊಳು ಬರೆದಿರುವಕ್ಷರವೋದು!
ವೀರನು ನಿನ್ನನು ಒಯ್ವನು ಎಂದು

ಪುತ್ರನ ಹುಟ್ಟನು ಬೈಚಿಟ್ಟಹೆನು.
ಜಗದಲಿ ನಿನ್ನಯ ಶೌರ್ಯವ ಬೀರು
ಬೇಕಾದರ ಜೊತೆಯಲಿ ನೀ ಹೋರು.
ರುಸ್ತುಂ ಬಂದರೆ ದೂರಕೆ ಸಾರು. ೨೦೦
ತಾಯಿಯ ಮಾತಿಗೆ ನೀ ಬೆಲೆದೋರು."
ಪದಕದೆ ಬರೆದಿರುವಕ್ಷರ ನೋಡಿ,
ಕುಣಿಯುತ ನೆಗೆಯುತ ನಲಿನಲಿದಾಡಿ,
ತಾಯನು ನೋಡುತಲವನಿಂತೆಂದ.
"ಆತನೆ ಎನ್ನಯ ತಂದೆಯೊ? ಭಾಪು!
ರುಸ್ತುಂ ಪುತ್ರನು ಎನ್ನದೆಯೆನ್ನ
ಇಂತೇತಕೆ ನೀಂ ಮಾಡಿದೆಯಮ್ಮ?
ಹೆಚ್ಚಿಗೆ ಏನನು ನೀ ಮಾಡುವುದು?
ಹೆಂಗುಸು ಹೆಂಗುಸೆ ಏಗೈಯುವುದು?"

೩

ಹದಿನೇಳು ತುಂಬುತ್ತ ವರುಷ ನಡೆಯುತ್ತಿತ್ತು. ೨೧೦
ಯೌವನದ ಬಿಸಿರಕ್ತ ಮೈಯನಾವರಿಸಿತ್ತು.
ಕಾಳಗದೆ ಭಟರೆಲ್ಲ ಹಿಂದು ಹಿಂದೋಡುವರು!
ನೋಡಿದರು ರು–ಸ್ತುಂ, ರುಸ್ತುಮೆಂದೆನ್ನುವರು.
"ಆ ರುಸ್ತುಮನನೊಮ್ಮೆ ನೋಡಬೇಡವೆ ನಾನು?
ಈ ವೀರಪುತ್ರನನು ಕಾಣಬೇಡವೆ ಅವನು?"
ಎಂದು ಬಗೆ ಬಗೆಯಿಂದ ದಾರಿಯನು ಹುಡುಕುವನು.
ಶೂರನಂ ಶೌರ್ಯದಿಂದರಸಬೇಕೆನ್ನುವನು.
ಒಂದು ದಿನ ತಾಯ್ಬಳಿಗೆ ಬಂದು ತನ್ನಯ ಮನದ
ಚಿಂತಿತವನರುಹುತ್ತ ಕೈವಿಡಿದು ಕೇಳಿದನು
"ರುಸ್ತುಮನನರಸುವೆನು ಅಪ್ಪಣೆಯ ನೀಡೆ"ಂದು. ೨೨೦
ಮರುಗುತ್ತ ಮೈದಡವಿ ಮಾತೆಯೆಂದಳು ಆಗ

"ಪುತ್ರ ನಿನ್ನಂ ತೊರೆದು ಬದುಕಲಾರೆನು ನಾನು.
ಆಶ್ರಯವನಗಲಿಸಲು ಲತೆಯು ಬದುಕುವುದೆಂತು?
ರುಸ್ತುಮನು ಬರಬೇಕು. ಆವೆಡೆಯೊಳವನಿಹನು?
ಅವನಿರುವ ರಾಷ್ಟ್ರವದು ಅತಿದೂರ ವತಿದೂರ!
ಎಂತು ನೋಡುವೆಯವನ? ಅವನ ಸುದ್ದಿಯೆ ಇಲ್ಲ!
ಈಗ ಯುದ್ಧವ ಬಿಟ್ಟು ತನ್ನ ನಾಡಿಗೆ ಹೋಗಿ
ಶಾಂತತೆಯೊಳಿರುತಿಹನು—ಎಂದು ಕೇಳಿಹೆ ನಾನು.
ಎಲ್ಲಿ ಹುಡುಕುವೆಯವನ?"

"ಎಲ್ಲಿರಲಿ ಬರಿಸುವೆನು.
ನನಗೆ ತನ್ನಯ ಸ್ಥಳವನವನು ಬಿಟ್ಟಿರಬಹುದು. ೨೩೦
ರುಸ್ತುಮನ ಮಗನುನು ಆಟ ಊಟದೊಳಿರೆನು.
ವೀರಪುತ್ರನೆ, ಭಾಪು! ಎಂದು ಜನರೆನಬೇಕು.
ಆಗ ತಂದೆಯು ಬಂದು ನನ್ನ ಮುತ್ತಿಡಬೇಕು.
ಗಾಳಿಯೊಳು ವಾರ್ತೆಯನು ಕಳುಹುವೆನು ಕರಸುವೆನು.
ಕಳಿಸೆನ್ನ ನೀನಮ್ಮ."

"ಉರಿಸಬೇಡೆನ್ನೆದೆಯ.
ಶತ್ರುಗಳ ಒಡಲೊಳಗೆ ಅಡಗಿಹನು ಅವನೀಗ.
ಹೆಣ್ಣು ಹುಟ್ಟಿಹಳೆಂದು ನಾ ತಿಳಿಸಿದಂದಿಂದ
ನಮ್ಮೆಲ್ಲರನು ಮರೆತು, ವಾರ್ತೆಯನು ಕಳಿಸದೆಯೆ
ದೂರಮಿಹ. ದುಡುಕದಿರು, ಎಚ್ಚರದಿ ನಡೆಯುತಿರು.
ರುಸ್ತುಮನ ಕಂಡೊಡನೆ ರೇಗಿಸದೆ ಕಾಲ್ಗೆರಗು. ೨೪೦
ಸುತ್ತಲಿಹ ಜನರಲ್ಲಿ ಉತ್ತಮೋತ್ತಮನವನು.
ಆನೆಯಂದದ ನಡೆಯು, ಸಿಂಹದಂದದ ನುಡಿಯು,
ಸಾರ್ವಭೌಮನ ಬೆಡಗು ನೋಡಿದೊಡನೆಯೆ ತಿಳಿಗು.
ಹಾದಿಯಲಿ ದೇವತೆಯು ಶುಭವನೀಯಲಿ ನಿನಗೆ.
ನಿಮ್ಮಯ್ಯನವನನು ಬೇಗ ತಂದು ತೋರೈಯೆನಗೆ.
ಎನ್ನೆದೆಯು ನಡುಗುತಿದೆ. ವೀರನಾದೆಯೊ ಏಕೆ?

ಹೋ ಹೋಗು. ಮಾಜದಿರು. ವಿಜಯವಾಗಲಿ ನಿನಗೆ."
ಎಂದು ಹೇಳುವ ತಾಯ ಸಂತಯಿಸಿ "ರುಸ್ತುಮನ
ಕರಿಸುವೆನು ಬರಿಸುವೆನು" ಎಂದು ಭಾಷೆಯನಿತ್ತು,
ವೀರ ರಕ್ಷಾಪದಕ ಕೊರಳೊಳಲೆಯುತ್ತಿರಲು, ೨೫೦
ವೀರದೊಡಿಗೆಯ ತೊಟ್ಟು ವೀರಮಾತೆಯ ನಮಿಸಿ,
ತಾತನಪ್ಪಣೆಗೊಂಡು, ಸ್ನೇಹಿತರ ಬೀಳ್ಕೊಂಡು,
"ರುಸ್ತುಮನ ಕರೆತಾರೊ, ತಿರುಗಿ ಬೇಗನೆ ಬಾರೊ,"
ಎಂದೆಲ್ಲ ಹೇಳುತಿರೆ, ತನ್ನೊಳಗು ಸಾರುತಿರೆ,
ಆ ಪುರವನಭಿನಮಿಸಿ, ವಿಜಯಯಾತ್ರೆಗೆ ವೀರ
ಆವೂರ ಹೊರವಂಟನು.
ಉತ್ತಮಾಶ್ವದಮೇಲೆ ಉತ್ತರಿಸಿ ಮಾರ್ಗವನು
ಸುತ್ತಲೆಲ್ಲೆಡೆಯಲ್ಲಿ ಬಿತ್ತರಿಸಿ ಕೀರ್ತಿಯನು
ನಿಂತಲ್ಲಿ ನಿಲ್ಲದೆಯೆ ಪಯಣವನು ಸಾಗಿಪನು.
ಅಲ್ಲಲ್ಲಿ ನಿಲ್ಲುತ್ತ ವಿಷಯವನು ಗ್ರಹಿಸುವನು
ಶೂರತನದಲಿ ಹೋರಿ ಜನವ ಸಂಗ್ರಹಿಸುವನು. ೨೬೦
"ಒಂದು ದಿನ ನಿಂತಲ್ಲಿ ಒಂದು ಸಾಹಸಕೃತ್ಯ
ವಿಲ್ಲದೆಯೆ ಇವನಿಲ್ಲ. ಇವನಾರು?" ಎಂದೆಲ್ಲ
ಕೇಳುವರು ನೋಡುವರು, ನುಡಿಸುವರು ನಮಿಸುವರು.
"ಹಿಂದೆ ರುಸ್ತುಮನಿದ್ದ. ಇಂದು ನೀನೆ"ನ್ನುವರು.
"ಅವನೀಗ ಎಲ್ಲಿಹನು?" ಎಂದೀತ ಕೇಳುವನು.
ಯಾರಿಗಿದು ತಿಳಿದಿಹುದು? ಯಾರೇನು ಹೇಳುವರು?
ತಾಯೂರ ನೆನೆಯುವನು. ತಂದೆಯೂರನು ಆಗ
ಊಹಿಪನು. ರುಸ್ತುಮನು ಸೇವಿಸಿದ ಗಾಳಿಯನು
ಕುಡಿದಿರುವ ನೀರನ್ನು ನಡೆದಿರುವ ನೆಲವನ್ನು
ಕಲ್ಪಿಸುತ ನಡೆಯುವನು, ಮುಂದೆ ಮುಂದೈದುವನು. ೨೭೦
ಎಲ್ಲಿ ಜನ ನರಳುವರೊ ಅಲ್ಲಿ ಸೊಹ್ರಾಬಿಹನು.
ಸಾಬಲನು ದುರ್ಬಲನ ಪೀಡಿಸುವೊಡಲ್ಲಿಹನು.

ಕೊಲೆಗಾರ, ಛಲಗಾರ, ಹಠಗಾರರೆಲ್ಲ
ಇವನಿರಲು ಸೋಜಿಗವು, ಸಜ್ಜನರು ಅವರೆಲ್ಲ.
ಲೋಹಮಯದೇಹವಿದು ಒಳಗೆ ವೈದ್ಯುತವಾಹ!
ವೀರರಾದವರೆಲ್ಲ ದೂರ ಸಾರುವರಹಹ!
ದಿಕ್ಕು ದಿಕ್ಕಿಗೆ ಇವನ ಹೆಸರು ಹಬ್ಬುತ ಹೋಯ್ತು.
ರುಸ್ತುಮಗೆ ಇವ ಸಾಟಿ ಎಂದು ನಾಣ್ಣುಡಿಯಾಯ್ತು.
ಊರೂರ ಸುತ್ತಿದನು ಪುರಪುರವ ತಿರುಗಿದನು ;
ರುಸ್ತುಮನು ಇರಲಿಲ್ಲ, ವರ್ತಮಾನವು ಇಲ್ಲ. ೨೮೦
ಹೋಗುತಿರೆ ಹಾದಿಯೊಳು ಹರಿಯುತಿಹ ಕಡಲಂತೆ
ತಾರ್ತರರ ಸೈನ್ಯವನು ನೋಡಿದನು. ಆಮುಂತೆ
ರಾಜನಫ್ರಾಸಿಯಬನೆಲ್ಲರಿಂ ಮುಂದಾಗಿ
ಸಾಗುತಿರೆ, ಸೊಹ್ರಾಬನಲ್ಲಿದ್ದ ಹಿಂದಾಗಿ.
ಯಾರಿವನು? ಯಾರಿವನು? ಎಂದಿವನ ಕರೆತಂದು
ರಾಜನೆದುರಲಿ ನಿಲಿಸೆ,
"ಆರಯ್ಯ ನೀಂ?"
"ಪ್ರಭುವೆ, ನಾ ಸೊಹ್ರಾಬ್."
"ಕೇಳಿಹೆನು ಈ ಹೆಸರ. ಸೊಹ್ರಾಬ
ನೆಂಬವನು ನೀನೆಯೇಂ? ಎಲ್ಲಿಂದ ಬಂದಯ್?"
"ದೊರೆಯೆ, ಕುರ್ಡಿಸ್ತಾನದಿಂ."
"ಎತ್ತ ಹೋಗುವುದೊ?"
"ವೀರರಲಿ ಹೋರಾಡೆ ;"
"ಹೋರಾಡ ಹೊರಟಿರುವೆ? ೨೯೦
ನೀಂ ವೀರ ಸಾಜವಿದು. ಎನ್ನೊಡನೆ ಬರುವೆಯಾ?
ಮನ್ನಿಸುವೆನುಚಿತದಿಂ."
"ಎನಗಾಸೆ ಕೀರ್ತಿಯೊಳು.
ದೆಸೆದೆಸೆಗೆ ಈ ಹೆಸರು ಹರಡಿಹೋಗಲುಬೇಕು."
"ಹರಡಲ್ಕೆ. ಖುಸ್ರುವಂ ಗೆಲ್ಲುವುದೆ ನಮಗೆಲ್ಕೆ."

"ಅಲ್ಲಿ ರುಸ್ತುಮನಿಹನು ; ಅವನು ರಂಗಕೆ ಬಹನು."
"ಹಿಂದಿವನು ಇರದಿರುವ ರಣರಂಗವಿರಲಿಲ್ಲ.
ಈಗವನ ಸುಳಿವಿಲ್ಲ. ಎಲ್ಲಿಯೂ ಅವನಿಲ್ಲ.
ತಂದೆಯನು ಸೇವಿಸುತ ಸೆಯ್ಸ್ಟಾನದಲ್ಲಿಹನು.
ಅಡಕಿ ತುಂಬಿಹ ಧನವ ಭೋಗಿಸುತ ಕುಳಿತಿಹನು.
ಸಹಜ ಸುಂದರವಾದ ಪ್ರಕೃತಿಯಲ್ಲಡಗಿಹನು. ೩೦೦
ಈ ಕದನ ಕಡಿದಾಟವೆಲ್ಲವನು ಬಿಟ್ಟಿಹನು.
ಅದರಿಂದೆ ನಾವೀಗ ಮುಂದಕ್ಕೈತಂದಿಹೆವು.
ನಿನಗೇಕೆ ರುಸ್ತುಮನು?" ಎಂದು ರಾಜನು ಕೇಳೆ—
ಸೊಹ್ರಾಬ ನುಡಿಯುವನು— "ನಾನವನ ಕೇಳಿಹೆನು.
ಆ ಬೆಟ್ಟದಾಕಾರ! ಆ ಮೇಘ ಘರ್ಜನೆಯು!
ಅವನ ನೋಡುವೊಡಾಶೆ ಸಹಜದಿಂದಿಹುದೆನಗೆ.
ಈಗವನು ಇದ್ದರೇಂ? ಮತ್ತೊಮ್ಮೆ ಬಂದರೇಂ?
ಪರಿಕಿಸೆನ್ನನು ಧೀರ, ಒಕ್ಕಲಿಕ್ಕುತೆ ವೀರ
ತಂಡವನು ತರಿದೊಟ್ಟಿ, ರುಸ್ತುಮನೆ ನಿಂತೊಡಂ
ಕೈಕಟ್ಟಿ ಹಿಂದಟ್ಟಿ ಬೆರಗು ಬಡಿಸದೆ ಬಿಡೆನು"— ೩೧೦
ಎಂದು ಗರ್ಜಿಸುತಿರುವ ಬಾಲನಂ ಕೈವಿಡಿದು
"ವೀರನಂ ನೋಡುವಾಸಕ್ತಿಯಿದು ಯುಕ್ತವೈ.
ನೀನವಗೆ ಸರಿಸಾಟಿ ನನ್ನೊಡನೆ ಬಾರೆ"ನಲು
ಆಗಲೆನ್ನುತಲುಳಿದು ಯೋಚಿಸುವನೀ ತೆರದೆ.
"ಇನ್ನೆತ್ತ ಹೋಗುವುದು? ಮತ್ತೇಕೆ ಹುಡುಕುವುದು?
ಸಮರದಲಿ ಸಾಹಸವ ಕೈಮೀರಿ ತೋರುವೆನು.
ಎಲ್ಲಿರಲಿ ಈ ಮಾತು ತಂದೆಯನು ಮುಟ್ಟುವುದು.
ಒಂದಲ್ಲದೊಂದುದಿನ ನಾನವನ ಕಾಣುವೆನು.
'ವೀರ ನೀನಾರಮಗ' ಎಂದಾತ ಕೇಳುವನು.
'ನಾ ನಿನ್ನ ಮಗನಹುದು. ನಿಜವಹುದು. ಎಲೆ ತಂದೆ, ೩೨೦
ಅರಸರಸಿ ಬೇಸತ್ತು, ಇಂದು ನಿನ್ನನು ಕಂಡೆ.'

ಎಂದವನನಪ್ಪುವೆನು. ಆಗೆನ್ನ ಮುದ್ದಾಡಿ,
ಮಾತೆಯನು ಹಳಿಯುವನು 'ಸುಳ್ಳ ಕಳಿಸಿದಳೆ'ಂದು
ತಾತನಿಗೆ ತಿಳುಹುವೆನು 'ಅವಳು ಹೆಂಗುಸು' ಎಂದು."

೪

ಇಂತು ದಿನಗಳು ಕಳೆಯೆ ಹೊಸವೀರ ರಣಕಿಳಿಯೆ,
ಪಾರ್ಶಿಕರ ಪಾಳೆಯದ ಸುಭಟ ಸಂದಣಿಯಲ್ಲಿ
ಮುಂಬರಿದು ಬಂದವರು, ಹೆಸರಳಿದು ಹೋಗುವರು.
ದಿನದಿನವು ತಾರ್ತರರು ಮುಂದೆ ಮುಂಬೈದುವರು;
ತಡೆಯಿಲ್ಲ, ಪಡೆಯೆಲ್ಲ ಕಂಗೆಟ್ಟು ಓಡಿದುದು.
ಚರರೋಡಿ ಬಂದು ಬಿನ್ನೈಸಿದರು "ಭೋ ಭೂಪ, ೩೩೦
ಹೊಸವೀರ ಸೊಹ್ರಾಬಗಿದಿರಿಲ್ಲ, ಬೆದರಿಲ್ಲ;
ಯಮನಂತೆ ಜನಗಳನು ಹೊಯ್‌ಹೊಯ್ದು ಕೆಡಹುವನು.
ಹೊರಹೊರಡು, ಸೈನ್ಯವನು ಸಜ್ಜಾಗಲುಜ್ಜುಗಿಸು
ರುಸ್ತುಮನ ಬರಗೊಡಿಸು; ಮತ್ತೊಬ್ಬ ಮುಂದಾಗಿ
ಸೊಹ್ರಾಬಗಿದಿರಾಗಿ ನಿಲ್ಲುವನ ಕಾಣೆನಾ
ವೆಂ"ದೆನಲು, ರಾಜಾಜ್ಞೆಯಿಂದೆಲ್ಲ ದೆಸೆಗಳಿಗೆ
ರುಸ್ತುಮನ ಕರೆತರಲು ಸೊಹ್ರಾಬ ಬಿಟ್ಟಿರುವ
ಬಾಣಗಳೊ ಎನುವಂತೆ ಚರರೋಡಿ ಹುಡುಕುತ್ತ
ಹಬ್ಬಿ ಹರಿದಾಡುತಿರಲು—
ರಾಜಸೇವೆಯ ತೊರೆದು, ದೇವಸೇವೆಯ ಕೊಂಡು,
ಹಲವರನು ಕೊಂದುದಕೆ ಫಲವೇನು, ಎಂದೆನುತ ೩೪೦
ಅಡವಿಯಲಿ ಗಿಡು ಮರವ ಕೇಳುವೆನೊ, ಎಂಬಂತೆ
ತಾಪಸನ ತೆರದಲ್ಲಿ, ಕಾಡು ಮೃಗಗಳ ಕೂಡೆ,
ಓಡಾಡುತಿರುವವನ ಕಂಡೈದಿ ಪೊಡಮಟ್ಟು
ಹೇಳಿದರು ಪತ್ರಿಕೆಯ ಕೊಟ್ಟು—

"ಸೊಹ್ರಾಬನೆಂಬುವನು"
"ಕೇಳಿಹೆನು ಬಹುಶೂರ !"
"ಸರಿಸಾಟಿಯವಗಿಲ್ಲ."
"ಮೆರೆದಿರಲಿ ಮುಂದಾಗಿ."
"ಹೇ ವೀರ ತಾರ್ತರರನೊಡಗೊಂಡು ಬಂದಿಹನು".
"ಯೋಧರಿಲ್ಲವೆ ನಿಮಗೆ? ಇಂತೇಕೆ ಬಲುಬೇಗೆ?"
"ನಿನ್ನಂಥ ಜನರಿರಲು ಅವನಿಂತು ಬರುವನೇ?"
"ರಾಜಸೇವೆಯೆ ಬೇಡ. ಕೃತಕೃತ್ಯರವರಲ್ಲ.
ಎಲ್ಲ ನೋಡಿಹೆನೆನಗೆ ಯಶದೊಳಾಶೆಯು ಇಲ್ಲ. ೩೫೦
ಇಷ್ಟೇಕೆ ನನ್ನನ್ನು? ಹರೆಯದವರೆಷ್ಟಿಲ್ಲ?
ನರ್ತನಕೆ ಕೊರತೆಯೇ? ಔತಣಕೆ ಕಡಿಮೆಯೇ?
ಲೆಕ್ಕವಿಲ್ಲದ ಜನರನವ ಕೂಡಿಕೊಂಡಿಹನು.
ಮಾನವನು ಕಾವುದಕೆ ಪ್ರಾಣವನು ಕೊಡಲುಳ್ಳ
ವೀರರಲ್ಲಿಲ್ಲವೇನೈ?"
"ವಾಚಿಪುದು ಲೇಖನವ."
ಪತ್ರವನ್ನೋದುವನು :
"ಸ್ವಸ್ತಿ ರುಸ್ತುಮ ವೀರ ! ಎನಗಾಗಿ ಬರಬೇಡ.
ವ್ಯಕ್ತಿತನದಲಿ ಇಂದು ನನ್ನ ತಿಳಿಯಲು ಬೇಡ.
ಉಪಕಾರ ಬಗೆದವನು ನಿಜವಾಗಿ ನಾನಲ್ಲ.
ತಪ್ಪಿಹೋದುದು ದಿಟವು. ಒಪ್ಪವನು ಮಾಡಯ್ಯ.
ಕಷ್ಟದಲಿ ಕಾಯುವುದು ವೀರ ನಿನಗಿದು ಸಾಜ." ೩೬೦
ನಡುವೆ ಕೋಪಿಸಿ ತನ್ನ ಮನದೊಳಗೆ ನುಡಿಯುವನು—
"ಕಷ್ಟಬರೆ ನಷ್ಟಬರೆ ಭ್ರಷ್ಟರ್ಗೆ ಯಾರ್ ಬಹರು?"—
ಎಂದು ಹಿಂದಿನದ ನೆನೆಯುತ್ತ ಮುಂದೋದುವನು :
"ರುಸ್ತುಮನು ಇರುವಂತೆ ಮತ್ತೊಬ್ಬ ಮೇಲಹನು."
—ಯಾರವನು? ಸೊಹ್ರಾಬನಿರಬಹುದು. ಇದ್ದರೇಂ?—
"ಅವನ ನೀಂ ಬಿಡುವೆಯಾ? ಯಶಕೆ ನೀರ್ವಿಡುವೆಯಾ?

'ಹುಡುಗಗೊಬ್ಬಗೆ ಅಂಜಿ ಹಿಂಜರಿದು ಕುಳ್ಳಿಹನು.'
ಎಂದು ಜನರಾಡಲ್ಕೆ ನೀನದಂ ಸಹಿಸುವೆಯ?"—
ಹೀನೋಕ್ತಿ ರುಸ್ತುಮಗೆ! ಹುಡುಗನೇಂ? ದಡಿಗನೇಂ?
ಹಿಡಿದು ಭೂಮಿಗೆ ಬಡಿವೆ. ಗಣಿಸುವೆನೆ ಮರ್ತ್ಯನನು! ೩೭೦
ಓದುತೋದುತೆ ಕೋಪ ಕೆರಳೆ ಮುಂದೋದಿದನು—
"ನೀನೆ ಗಳಿಸಿದ ರಾಜ್ಯ ನೀನಿರಲು ಅಳಿಯುವುದು.
ಯಶವನ್ನು ದೇಶವನು ಹೆರವರಿಗೆ ಕೊಡಬಹುದೆ?
ಸೋತಿರುವೆ, ಸೋತಿರುವೆ; ನಿನ್ನನಾಂ ನಂಬಿರುವೆ.
ಕ್ಷಣಕ್ಷಣದೆ ನಿನ್ನನ್ನು ನೋಡುತ್ತ ಕುಳಿತಿರುವೆ."
ಪತ್ರವನು ಮಡಿಚಿದನು ಬೇಗಬಂದನು ಮನೆಗೆ.
ತಂದೆಗಿದ ತಿಳಿಸಿದನು. ಬಟ್ಟೆಯನು ಧರಿಸಿದನು.
ರಾಕುಷನನೆಳೆತಂದು, ಬೆನ್ನಮೇಲೇರಿದನು.
'ಮಿತ್ರ, ಹೊರಡೆಲೆ ವಿಜಯ, ವಿಜಯ' ಎಂದಪ್ಪಿದನು.
ಹಿಂದಿನಿಂ ಮಂದಿಗರ ಬರುವಂತೆ ಸಾರಿದನು. ೩೮೦
ಏತಕೋ, ಎದೆಯು ಡಬಡಬಯೆಂದು ಹೊಡೆಯುವುದು.
ರಾಕುಷನು ಹೊರಡುವನು. ಅವಗು ಇಂತಾಗುವುದು.
ವೀರನಿದ ಲೆಕ್ಕಿಪನೆ? ನಡೆ ಬೇಗ ರುಸ್ತುಮನೆ!
ಜಯವು ನಿನಗಾಗದಿನ್ನೆತ್ತ ತಾ ಹೋಗುವುದು?
ಒಂದು ನುಡಿಯೊಳಗೊಳಗೆ ನುಡಿಯುವುದು: "ಹೇ ವೀರ!
ಏತಕೀ ವಿಜಯವಿದು? ವಿಜಯವೇತಕೆ" ಯೆಂದು.
ವೀರನಿದ ಲೆಕ್ಕಿಪನೆ? ಕುದುರೆಯೋಡಿತು ಆಗ—
ನೆಲಮುಟ್ಟ ನೆಗೆಯಿತೋ? ಆಗಸವೆ ಹಾರಿತೋ?
ಕಣ್ಗೆ ಕಾಣವುವೆಲ್ಲ ಬಳಿಗೆ ಬರುವುವು ಬೇಗ.
ಬಳಿಯೊಳಿದ್ದುವುವೆಲ್ಲ ಕ್ಷಣಕೆ ಹಿಂದೋಡುವುವು. ೩೯೦
ಊರು ಕೇರಿಯ ಮೀರಿ, ಕಾಡುಮೇಡನು ಹಾರಿ,
ಗಾಳಿಯಂದದಿ ತೂರಿ,—ನೋಡಿ ನುಡಿವಷ್ಟರೊಳು
ಬಹುದೂರ ಮೈತಂದಿತಾಗ.

ಸಂಜೆ ಬೆಳಗಿನ ಮಬ್ಬು ಜಗವ ಕವಿಯುತಲಿತ್ತು
ಅಂತರಂಗದ ಮಬ್ಬು ಅದನು ಕೂಡುತಲಿತ್ತು.
ಅಲ್ಲಲ್ಲಿ ಒಂದೊಂದು ದೀಪವುರಿಯುತ್ತಿತ್ತು.
ಆಂತರದೊಳೊಮ್ಮೊಮ್ಮೆ ಬೆಳಕು ತೋರುತಲಿತ್ತು.
ದಿನದ ಯುದ್ಧವು ಮುಗಿದು, ವಿಶ್ರಾಂತಿಯನು ಬಗೆದು
ಉಭಯದಳಗಳ ಜನರು ಶಿಬಿರದೊಳಹೊಗುತಿರಲು,
ಪಾರ್ಶಿಕರ ಪಾಳೆಯಕೆ ವೀರನೊಬ್ಬನು ಬಂದ.
ಶರವೇಗದಿಂ ಚಿಮ್ಮಿ ಗಾಳಿಯೊಡನೈತಂದ. ೪೦೦
"ಸಾರ್ವಭೌಮನು ಕರಸೆ ಬಂದ ರಷ್ಯಾಧಿಪನೊ?
ಈತಂಗೆ ನೆರವಾಗೆ ಚ್ಯೈನಪನು ಬಂದನೋ?
ಯೋಧನೊಬ್ಬನು ಇಲ್ಲ, ಹಿಂದಿನಿಂ ಬರಬಹುದೊ?"
ಎಂದು ಬಗೆಬಗೆಯಿಂದ ನೋಡಿದವರಾಡುತಿರೆ,
ಸರ್ವಸೇನಾಧಿಪನು ಮರ್ಯಾದೆಯಿಂದವನ-
ನಿದಿರ್ಗೊಂಡು, ಕೈವಿಡಿದು, ಕುಶಲತೆಯನಾರೈದು
ಮೊದಲೆ ಮಾಡಿದ ಬಿಡದಿಯೊಳಗೆ ತಂದಿರಿಸಿದನು.
ಉಪಚರಿಸಿ ಬಹುಹೊತ್ತು ಮಾತನಾಡುತಲಿದ್ದು,
ಬೀಳ್ಕೊಂಡು ಹೊರಟಾಗ ಬಹುಹೊತ್ತು ಕಳೆದಿತ್ತು.
ಕತ್ತಲೆಯು ಕವಿದಿತ್ತು. ಪಾಳೆಯವು ಮಲಗಿತ್ತು.
ಜನಕೆ ಇನ್ನೇನು ಗೊತ್ತು? ೪೧೦
ನಿದ್ದೆಯಿಲ್ಲವು ಅಂದು ರುಸ್ತುಮಗೆ ಆಯಸವು.
ಹೊರಳಾಡಿ ಎಡಬಲಕೆ ತಿರುಗುತ್ತ ಚಿಂತಿಪನು.
ಇಷ್ಟೊಂದು ಆ ಬಾಲಕಗೆ ಶಕ್ತಿಯೇತಕ್ಕೊ?
ಆದೊಡಂ ತಾರ್ತರರನವನೇಕೆ ಕೂಡಿಹನೊ?
ಹಾಗಿರುವ ಮಗನೆನಗೆ ಇದ್ದಿದ್ದರೀ ಧ್ವಜವ-
ನವನ ಕೈಯಲಿ ಕೊಟ್ಟು, ಯುದ್ಧಮಾಡಲು ಕಳುಹಿ,
ಆ ವಿಮಲ ಯಶದೊಳಗೆ, ವಿಜಯ ವಾರ್ತೆಗಳೊಳಗೆ
ಊರಿನಲಿ ನಾ ನಿಂತು ಕವಚಗಳ ಕಳೆದುಳಿದು

ವೃದ್ಧಪಿತನನು ನಿತ್ಯ ಸೇವಿಸಲ್ ಬಹುದಿತ್ತು.
ಇಂದಾದರಿವನನ್ನು ಹಿಡಿದೆಳೆದು ಕರೆತಂದು ೪೨೦
ಸೋತೆನೆನ್ನಿಸಿಕೊಂಡು ನನ್ನಲ್ಲಿ ನಿಲಿಸುವೆನು.
ಬದುಕಯ್ಯ ಬಹುಕಾಲ ಬಾಲಕನೆ, ಈ ನಿನ್ನ
ಹೆಸರು ಬಹುಕಾಲವಿರಲಿ.

೫

ರಾತ್ರಿಯಲಿ ಮೊದಲೆರಡು ಯಾಮುಗಳು ಕಳೆದಿಹವು.
ಬೆಳಗಾಗಲುಳಿದಿಹುದು ಒಂದು ಯಾಮವು ಮಾತ್ರ
ಜಗವೆಲ್ಲ ಕೋಡುತಿದೆ. ಮಂಜುಹನಿ ಹನಿಯುತಿದೆ.
ಪಾಳೆಯಗಳೆರಡರಾ ನಡುವಿರುವ ಬಯಲಿನಲಿ—
ಬೇಸಿಗೆಯ ಬಿಸಿಲಿಂದ ಪಾಮೀರ ಪರ್ವತದ
ಹಿಮುಕರಗಿ ಹರಿಯುವಾ ಹಿಮುನದಿಯ ಬಯಲಿನಲಿ
ಉದಯಮಾರುತನೆದ್ದು ಮಂಜುಹನಿಯಲಿ ಮಿಂದು
ದಣಿದು ಮಲಗಿಹ ಜನರನಾದರಿಸುತಿರುತಿಹನು. ೪೩೦
ಎಚ್ಚರಿಂದಿರುವವನ ಮೈಯ್ಯನಲ್ಲಾಡಿಪನು.
ಆಗ ತಾರ್ತರರ ಪಾಳೆಯದೆ ಸೊಹ್ರಾಬ ತಾ
ನೆದ್ದು ದಿಕ್ಕುಗಳ ನೋಡುವನು ಮೇಣ್ಮಲಗುವನು.
ಹೊರಳುವನು, ಏಳುವನು ಬೆಳಗಾಗದೆನ್ನುವನು.
ಮೂಡಲಲಿ ಕೆಂಬೆಳಗು ಕಂಡುಕಾಣದ ಮೊದಲು,
ಮತ್ತೊಮ್ಮೆಯವನೆದ್ದು, ಮೇಲೆ ಬಟ್ಟೆಯ ಹೊದ್ದು,
ಮುಂದೆ ಹಾದಿಯನು ಹಿಡಿದು –
ಬಿಡದಿ ಬಿಡದಿಯ ದಾಟಿ ಬೇಗ ತಾ ಬರುತಿಹನು.
ಯಾರೊಬ್ಬರೆದ್ದಿಲ್ಲ ಏಳುವಂತೆಯು ಇಲ್ಲ.
ಗಿಡು ಮರದ ಮರಮರವು, ನದಿಯೊಳಗೆ ಸರಸರವು,
ಮತ್ತೇನು ಸದ್ದಿಲ್ಲ. ಹನಿಗಳನು ಹಾಯುತ್ತ ೪೪೦
ಬಹುದೂರ ಹೊಳೆಯ ದಂಡೆಯ ಮೇಲೆ ಮೇಲ್ತೆರದ

ಬೀಡಾರಕ್ಕೈತಂದ. ಅದು ಪಿರ್ರಾವೀಸನದು.
ಅವನು ಸೇನಾಧಿಪನು. ಬಾಗಿಲನು ಓರ್ರೈಸಿ
ಮೆಲ್ಲ ಮೆಲ್ಲನೆ ಹೊಗಲು, ಕಡೆನಿದ್ರೆಯಲ್ಲಿದ್ದ
ಮುದುಕನಾಕ್ಷಣವೆದ್ದು "ಯಾರೆಲೈ ನೀನಾರು?"
ಎಂದು ಕತ್ತಿಯಕೊಂಡು "ನಮ್ಮವನೊ, ಪರನೊ?" ಎನೆ,
"ನಾನು ಸೊಹ್ರಾಬ್, ತಾತ."

"ಏತಕ್ಕೈತಂದೆ ಮಗು?
ಶತ್ರು ಸಜ್ಜಾಗಿಹನೆ? ಮೀರಿ ಬರುವಂತಿಹನೆ?
ಬೆಳಕು ಹರಿಯದ ಮೊದಲು ಬಂದುದೇತಕೆ?" ಎನಲು
"ಎಲ್ಲರೂ ಮಲಗಿಹರು. ನಾನೊಬ್ಬನೆದ್ದಿಹೆನು. ೪೫೦
ಎನ್ನೊಂದು ಮಾತನ್ನು ನೀ ನಡಿಸಬೇಕಯ್ಯ."
"ನಾ ನಡಿಸದಿದ್ದಂಥ ಮಾತದಾವುದು ಹೇಳು—
ಎಂದು ಕತ್ತಿಯನಿಳುಹಿ, ಕಂಬಳಿಯ ತಾ ಹೊದೆದು,
ಪಕ್ಕಕ್ಕೆ ಯೋಧನಂ ಕರೆದು ಕೈವಿಡಿದು ಕೇಳೆ—
"ಗುಂಪಿನಲಿ ಯುದ್ಧವನು ನಾವು ಮಾಡಿಹೆವು."

"ಹೂಂ."

"ಜಯವ ಪಡೆದಿಹೆವು."

"ಹೂಂ."

"ಆ ಹೆಸರು ಯಾರ್ಗಹುದು?"

"ಒಟ್ಟನಲಿ ಯೋಧರ್ಗೆ ಎಲ್ಲರ್ಗೆ ಸೇರುವುದು?
ಆದೊಡಂ ಮುಂಬರಿದ ಯೋಧವೀರರ ಹೆಸರ
ವಿಜಯವೇ ಸಾರುವುದು. ಈ ಕೆಲವು ದಿನಗಳಲಿ
ನೀನೆಷ್ಟು ಖ್ಯಾತಿಯನು ಪಡೆದುನಿಂದಿಹೆ ನೋಡು" ೪೬೦
ಎಂದ ಮಾತನು ಕೇಳಿ ಹೊಸವೀರನುಸುರಿದನು—
"ಆದರೇಂ ಸೊಹ್ರಾಬನೆಲ್ಲರೊಂದಿಗೆ ಒಬ್ಬ.
ವಿಜಯದಲ್ಲೆಲ್ಲರೂ ಭಾಗಿಗಳು ಒಬ್ಬನೆಯೆ?
ಇದರಲ್ಲಿ ಸಾಹಸದ ಎಲ್ಲೆಯದು ತೋರುವುದೆ?

ವೀರನೊಬ್ಬನು ಬರಲಿ. ಅಲ್ಲಿ ನಾ ಹೋರುವೆನು.
ಯಾರು ನಾನೆಂಬುದದು ಆಗಳೇ ತಿಳಿಯುವುದು."
ಎಳೆಯನೆಂದುದ ಕೇಳಿ ಮರುಗುತ್ತ ಮನದೊಳಗೆ—
"ಮಗು, ಎನಗೆ ನೀಂ ಪ್ರಾಣ, ದೊರೆಗೆ ನೀನೇ ಜೀವ.
ಈವರೆಗೆ ಪಡೆದಿರುವ ವಿಜಯವಿಂದಿಗೆ ಸಾಕು.
ಒಂಟಿ ಕಾಳೆಗದಲ್ಲಿ ಸಂಕಟವು ನಿಶ್ಚಯವು. ೪೭೦
ಇಬ್ಬರೊಳಗೊಬ್ಬನಲ್ಲಳಿಯಬೇ ಬೇಕಯ್ಯ.
ಜಯದ ಹೋರಾಟದಲ್ಲಿ ಉಳಿವ ಯೋಚನೆಯೆಂತು?
ಹೀಗಿರಲು ಕುವರ ಕೇಳ್ ನಾನದಕೆ ಸಮ್ಮತಿಸೆ—"
ಎನುವ ಸೇನಾಧಿಪಗೆ ಸೊಹ್ರಾಬ ಹೇಳಿದನು,—
"ರುಸ್ತುಮನ ಮಗ ನಾನು." ಸೇನಾನಿ ಬೆನ್ತಡವಿ—
"ಏನ್! ರುಸ್ತುಮನ ಮಗ? ರುಸ್ತುಮಗೆ ಮಗನಿಹನೆ?
ಇರುವುದಾದರೆ ನೀನೆ ಅವನ ಪುತ್ರನು ನಿಜವು.
ಇಂತಿದನು ನನಗೇಕೆ ಈ ವರೆಗೆ ಬೈಚಿಟ್ಟೆ?
ವೀರವರ?" ಎಂದೆನಲು ರಣಧೀರ ಹೇಳುವನು—
"ರುಸ್ತುಮನ ಹೆಸರಿನಿಂದುನ್ನತಿಯ ನಾ ಬಗೆಯೆ ೪೮೦
ಈಗೆನಗೆ ಇದಿರಿಲ್ಲ. ಆ ಹೆಸರ ಹೇಳಿದರೆ
ಮುಂದೆ ಬರುವವರಿಲ್ಲ. ಯಾರೊಡನೆ ಹೋರುವುದು?
ಧಿಟ್ಟತನದಲಿ ನಾನೆ ಹೆಸರ ಗಳಿಸಲು ಬೇಕು!
ಆಗ ನಾನಾರು? ರುಸ್ತುಂಪುತ್ರನೆನಬೇಕು!
ಪುತ್ರ ತನಗಿಹನೆಂದು ರುಸ್ತುಮಗು ಗೊತ್ತಿಲ್ಲ.
ಇಗೊ ನೋಡು, ರುಸ್ತುಮನ ಅಂಕಿತದ ಪದಕವಿದು
ಎನ್ನೆದೆಯ ಮೇಲಿಹುದು . ಅವನನರಸುತ ಬಂದೆ.
ನಿನ್ನಲ್ಲಿ ನಾ ನಿಂದೆ. ಇಷ್ಟ ಸಲಿಸೆಲೆ ತಂದೆ,
ಶೂರನೊಬ್ಬನ ಮುಂದೆ ನಾನು ಕಾದುವೆನೆಂದು."
ಎಂದ ದೃಢವನು ತಿಳಿದು ಸೇನಾನಿ ಹೇಳಿದನು— ೪೯೦
"ಅಚ್ಚರಿಯು ಅಚ್ಚರಿಯು: ಕನಸ ಕಂಡೆನೊ ನಾನು!

ನಿಶ್ಚಯದೆ ರುಸ್ತುಮನ ಮಗ ನೀನು. ಆಗಲ್ಕೈ,
ಹಿಂದಿನಂತೆಲ್ಲರಲಿ ಸೇರಿ ಕಾಳಿಗಪಾಡು.
ನಾವೆಲ್ಲರಿರುತಿರಲು ಒಬ್ಬಗೇತಕೆ ಘಾತ?
ರುಸ್ತುಮನು ಇಲ್ಲಿಲ್ಲ. ಈ ನಿನ್ನ ಕೀರ್ತಿಯನು
ಅವನು ಕೇಳದೆ ಇಲ್ಲ. ನೀನವನ ಸುತನೆಂದು
ಆ ವೀರ ಹೇಗೆ ಬಲ್ಲ?

ಗಾಯಗೊಂಡಿಹ ಮ್ಯೊಯ್ಯೋಳವನೆಡೆಗೆ ಹೋಗುವೆಯ?
ರುಸ್ತುಮನ ಮಗನೆಂದು ಹೇಳುತ್ತ ನೀ ಹೋಗು.
ದಿನವೆರಡು ನಾಲ್ಕಾಗೆ, ನಿನ್ನನ್ನು ನೋಡಲ್ಕೆ
ತಾನೆ ಬರುವನು ಅವನು. ಕಷ್ಟಕ್ಕೆ ಕೈ ಹಾಕಿ, ೫೦೦
ಜೀವವನು ತೃಣವಾಗಿ ಎಣಿಪುದೇತಕೆ?" ಎನಲು
ಅದಕೆ ತಾನೊಪ್ಪದೆಯೆ ತರುಣ ನಿಂತೆನುತಿಹನು:
"ಬದುಕಿದರೆ ವೀರಸುತನನ್ನವನು ನೋಡುವನು.
ಅಲ್ಲವೆನೆ ರುಸ್ತುಮಗೆ ಪುತ್ರನಿಲ್ಲವೆ ಇಲ್ಲ.
ಸತ್ತವಗೆ ಬಲವೇಕೆ, ಛಲವೇಕೆ, ಕುಲವೇಕೆ?
ಇದಕೇಕೆ ತಾತ ನೀನಿಷ್ಟು ಚಿಂತಿಸುತಿರುವೆ?"
ಬಾಲಕನ ನಿಶ್ಚಯವ ಕೇಳಿ ಸೇನಾಧಿಪನು—
"ಆಪತ್ತು ಬಂದೀತು, ಎಂದಾನು ಚಿಂತಿಪೆನು.
ಆದರೇನಣಿಯಾಗು. ಒಳ್ಳಿತಾಗಲಿ ನಿನಗೆ.
ಸಿಂಹಶಿಶುವನು ಯಾರು ತಡೆಯಲಾಪರು ಹೇಳು." ೫೧೦
ಎಂದು ಸಮ್ಮತಿಯಿತ್ತು ಬೀಳ್ಕೊಟ್ಟನವನ.

# ದ್ವಿತೀಯ ಪರಿಚ್ಛೇದ

## ೧

ಬೆಳಗಾಯ್ತು. ಭೇರಿಗಳು ವಾದ್ಯಗಳು ಮೊಳಗಿದುವು.
ಜನರೆದ್ದು ಪಾಳೆಯದ ಕೆಲಸದಲಿ ತೊಡಗಿದರು.
ಜೇನು ಗೂಡುಗಳಿಂದ ತುಂಬಿಗಳು ಹಾರಾಡಿ
ಮೊರೆವಂತೆ, ಜಯ ಜಯ ಧ್ವನಿಯೊಡನೆ ಕಾಲಾಳು,
ಕುದುರೆಯೇರಿದ ಆಳು, ಒಂಟೆಯಾಳುಗಳು ಮೇಣ್
ಕತ್ತಿಯಿಂ ಕೆಲವು ಜನ ಭಲ್ಲೆಯದೆ ಕೆಲವು ಜನ,
ಇವುಗಳಿಂ ರಾವುತರು, ಧನುವ ಕೆಲವರು ಹಿಡಿದು,
ಗದೆಯ ಕೆಲವರು ಕೊಂಡು, ವಿವಿಧ ಶಸ್ತ್ರಾಸ್ತ್ರಗಳ
ಅಂತು ಬಹು ಜನ ಕೊಂಡು, ತಂಡ ತಂಡದಿ ಬಂದು, ೫೨೦
ಬಯಲಿನಲಿ ಆಜ್ಞಾನುಸಾರವಾಗಿಯೆ ನಿಂದು,
ಉಚ್ಚಕಂಠದಿ ರಾಷ್ಟ್ರಗೀತೆಯನು ಹಾಡಿದರು.
ವಿಧಿಯಂತೆ ಧ್ವಜವನ್ನು ವಂದಿಸುತ ರಾಷ್ಟ್ರಕ್ಕೆ
ಪ್ರಾಣವನು ಕೊಡುವಂಥ ಆಣೆಯನು ಮಾಡಿದರು.
ಅಪ್ಪಣೆಯ ಕಾಯುತಿಹರು.—
ಅಂದು ಸೇನಾಧಿಪನು ಶಾಂತಿದಂಡವ ನೆಗಹಿ,
"ನಮ್ಮ ವೀರನು ಒಬ್ಬ ಇದಿರು ವೀರನ ಜೊತೆಗೆ
ಇಂದು ಸಮರಕೆ ನಿಲಲಿ. ನಮ್ಮೆರಡು ಕಡೆಯವರ
ಜಯವು ಮೇಣಪಜಯವು ಇಬ್ಬರಿಗೆ ಸೇರಿರಲಿ.
ಈ ನಮ್ಮ ಪಕ್ಷದಿಂ ಸೊಹ್ರಾಬ ನಿಲ್ಲುವನು,"
ಎಂದು ಘೋಷಣೆಮಾಡಿ ಪರಬಲದೊಳುಂ ಸಾರೆ, ೫೩೦
ಈ ಸೈನ್ಯ ಸಾಗರದ ಸಂತೋಷದಲೆಗಳಲಿ
ಸೊಹ್ರಾಬ ಮುಳುಗಿದನು. ರುಸ್ತುಮನ ಈ ಮಾತು
ಮುಟ್ಟುವುದು, ಈ ವಿಜಯವನ್ನವನು ಕೇಳುವನು,

ಎಂದು ಕೊಳ್ಳುತ ಹಿಗ್ಗಿ, ಆ ಬಂದೆ, ಈ ಹೊರಟೆ,
ಎಂದು ತವಕಿಸುತಿದ್ದನು.
ಅತ್ತಲಾ ಸೇನೆಯದು ಸಾಲಾಗಿ ನಿಂತಿಹುದು.
ಕೊನೆಗಾಲದಂತಕಂ ಕೊರಳ ಬಿಗಿದಂತಿಹುದು.
ಮಿಡುಕದೆಯೆ, ಉಸಿರದೆಯೆ "ಮೃತ್ಯುವಂ ಮುತ್ತಿಡಲು
ಮುಂಬರಿವರಾರೆ"ಂದು ಕೆಳಮೇಲು ನೋಡುತ್ತ,
ಗುಜುಗುಟ್ಟುತಿರಲಾಗ "ಈ ವಿರ ನಮ್ಮವನು"
ರುಸ್ತುಮನನೊಡಗೊಂಡು ಸೇನಾನಿ ನಾರಿದನು. ೫೪೦
"ಸೊಹ್ರಾಬಗಿದಿರಾಗಿ ಇಂದು ನಿಲ್ವನು" ಎಂದು.
ಅಸುಹೋದ ಕಾಲಕ್ಕೆ ಅಮೃತ ಬಂದಂತಾಯ್ತು.
ಆಗೆಲ್ಲ ನೋಡಿದರು ಇವನಾರು ರುಸ್ತುಮನೊ?
ಆ ಉಡಿಗೆ! ಆ ಠೀವಿ! ಆ ಬಿಂಕ! ಪರಿವಾರ!
ಯಾವುದಾವುದು ಇಲ್ಲ. ರುಸ್ತುಮನು ಹೀಗಿಹನೆ?
ಅಹುದು ರುಸ್ತುಮನಿವನು.—ಪಾರ್ಶಿಕರು ಹಿಗ್ಗಿದರು.
ನಟ್ಟದಿಟ್ಟಿಯೊಳಂದು ತಾರ್ತರರು ನೋಡುತಿರೆ
ಮುಂದು ಮುಂದೈದುತ್ತ ಸೇನಾನಿಯಂ ಕುರಿತು
ರುಸ್ತುಮನು ಹೇಳಿದನು "ಈ ಪಾಪಿ ಹಸ್ತದಿಂ
ಘಾತಕೃತ್ಯಗಳ ನಾನೆಣಿಕೆಯಿಲ್ಲದೆ ಗೈದೆ. ೫೫೦
ಸುರಿದ ನೆತ್ತರ ನೆಣನ ಹೊಳೆಗಳನು ನೋಡಿಹೆನು.
ಮುರಿದಿರುವ ಮೂಳೆಗಳ ಒಟ್ಟಿಲನು ಕಂಡಿಹೆನು.
ನುಲಿಯುತಿಹ ನರಗಳನು, ಅಳಲುತಿಹ ಜನರನ್ನು
ನೋಡಿ ಬೇಸತ್ತಿಹೆನು. ಕೊಲೆಗೆ ಹೇಸುವೆನಿಂದು.
ಏನು ಮಾಡಲಿ, ರಾಷ್ಟ್ರದಭಿಮಾನದಿಂ ಬಂದೆ!
ಇಂದು ಈ ಹಸುಳೆ ಬಂದೇಕೆ ನಿಲ್ಲುವುದೊ? ಹಾ,
ಎಳೆಯನೊಳು ಮನುಜನೊಳು ಕಾದುವುದು ಅಪಮಾನ.
"ಇಂದಿಲ್ಲಿ ನಿಂತಿಹನು ರುಸ್ತುಮನು" ಎಂಬುದಿದ
ಹೇಳಲಾಗದು ಆರ್ಗು. ಕುವರನಂ ಘಾತಿಸದೆ

ಮರವೆಯಿಂ ಮರೆಯಿಸುವೆ. ಸೋಲಿಸುತ ಕೊಂಡೊಯ್ವೆ" ೫೬೦
ಎಂದಡಿಯನಿಡುತಿರಲು "ರುಸ್ತುಮನ ನುಡಿಗಾರು
ಮಾರ್ನುಡಿವರೆ"ಂದೆನುತ, ಸೇನಾನಿ ಸೇನೆಗಳ
ಸಾಲುಗಳ ಹಿಂದಿಕ್ಕಿ ವೀರನಂ ಕೈವಿಡಿದು
ಕಣದೊಳಗೆ ಕರೆತಂದನು—
ರಣರಂಗಕಣಿಯಾಗಿ ಇಳಿದರಿಬ್ಬರು ಭಟರು.
ವೀರರನು ನೋಡಿದರು ಎರಡು ಪಕ್ಷಗಳವರು.
ಉತ್ಸಾಹದೊಳು ತಾರ್ತರರು ಪ್ರತಿವೀರನಂ ನೋಡಿ
"ಯಾರವನು? ಯಾರಾದರೇನು? ಈ ರುಸ್ತುಮಗೆ
ಅವನೆಲ್ಲಿ?" ಎನುತಿಹರು. ಹೊತ್ತು ಬಂದಿತು ಆಗ.
ರುಸ್ತುಮನು ನೋಡಿದನು ಇದಿರಾಳನಂದು.
ಅಚ್ಚರಿಯೊಳೊಮ್ಮೆಯೇ ತನ್ನ ತಾ ನೋಡಿದನು. ೫೭೦
ಯಾರ ಸುತನೀ ತರಳನೆನ್ನಂಗದಾಕಾರ!
ಈ ಮೈಯ ಧೃಷ್ಟತೆಯು ಪುಷ್ಟತೆಯು ಕಾಣುತಿದೆ!
ಎಳೆತನದ ಸುಳಿಮೈಯ್ಯ ರುಸ್ತುಮನೆ ಇವನಹುದು,
ಇಂತಪ್ಪ ಗಂಡುಗಲಿ ಮಗನನ್ನು ಪಡೆಯದೆಯೆ
ಹೆಣ್ಣ ಹಡೆದಳೆ ಮಡದಿ? ರಣದಲ್ಲಿ ಮೈಯ್ಯೊಡ್ಡಿ
ನಿಲಲಾರದಾ ಹೆಣ್ಣ ದೇವ, ಯಾರ್ ಬೇಡಿದರು?
ಹೀಗಿರುವ ಮಗನನ್ನು ನನಗೇಕೆ ವಂಚಿಸಿದೆ?
ಇಂತೆನುತ ಮನದಲ್ಲಿ ವಾತ್ಸಲ್ಯವುಂಟಾಗೆ
"ರಣದಲ್ಲಿ ವತ್ಸಲತೆ ಯಿಾಮೊದಲು ರುಸ್ತುಮಗೆ
ಎಂದೆಂದು ಇರಲಿಲ್ಲ. ಇಂದೇಕೆ? ಇಂತೇಕೆ? ೫೮೦
ಪುತ್ರನಿಲ್ಲದ ನನಗೆ ಇದು ಸಹಜ, ಇದು ಸಹಜ!"
ಎಂದು ಕೊಳ್ಳುವನಾಗ ; ಮತ್ತೆ ಚಿಂತಿಸುತಿಹನು.
"ಹೋಗಲೆಂದಿವನನ್ನು ಬಿಡುವೆನೇ? ಬಿಟ್ಟೆನೆನೆ,
ರುಸ್ತುಮನು ಸೋತನೆಂದೀಜಗವು ಹಳಿಯುವುದು."
ಎಂದು ಎವೆಯಿಕ್ಕುತಿರಲು—

ಕಾಲ್ಗೆರಗಿ ಕೈಗೊಟ್ಟು ಸೊಹ್ರಾಬ ಕೇಳಿದನು.
"ವೀರ ನೀನಾರಯ್ಯ? ಇಂತೆನ್ನ ನೋಡುತಿಹೆ!
ರುಸ್ತುಮನೊ? ಎನ್ನಾಣೆ, ಸತ್ಯವನು ನೀ ಸಾರು"
ಈ ಮಾತ ಕೇಳ್ದೊಡನೆಯೆಚ್ಚತ್ತು ರುಸ್ತುಮನು
ಆದರವನಡಗಿಸುತ, ಕೋಪವನು ನಟಿಸುತ್ತ,
ಮನದಲ್ಲಿ ಮರುಕಗೊಂಡವನಾಗಿ ಹೇಳಿದನು. ೫೯೦
"ಪೋರ ನಿನ್ನೊಡನೆ ಆ ರುಸ್ತುಮನೆ ಬರಬೇಕೆ?
ಆತನೇ ಬರಲೆಂದು ಸಾರಲಿಲ್ಲವು ಯಾರು."
ಅಂಬುಧಿಯ ಗಂಭೀರ ಘೋಷದಿಂದೀರೀತಿ
ನುಡಿವನಂ ನೋಡುತ್ತ ಸೊಹ್ರಾಬ ಹೇಳಿದನು.
"ರುಸ್ತುಮನೆ ಬಂದೊಡಾಂ ಬೆದರುವಂತಹನಲ್ಲ.
ಅವನಲ್ಲಿ ಕಾಳಗದ ಕಲೆಯ ಕಲಿಯುವೆನೆಂದು
ಅವನಿಂದ ಬಹುಮತಿಯ ನಾ ಪಡೆಯಬೇಕೆಂದು
ಅರಸುತಿಹೆ ನಾನವನ. ಅದಕಾಗಿ ಕೇಳಿದೆನು."
ಎಂದೆನ್ನೆ ಮರೆಮಾಜಿ ರುಸ್ತುಮನು ನುಡಿಯುವನು.
"ಆ ಗರಡಿಯೊಳೆ ನಾನು ಕಲಿತಿಹೆನು. ಕಲಿಸುವೆನು. ೬೦೦
ನನ್ನೊಡನೆ ಬಾ ನೀನು. ರುಸ್ತುಮನ ತೋರುವೆನು.
ಮಗನಂತೆ ನಿನ್ನನ್ನು ರುಸ್ತುಮನು ನೋಡುವನು.
ನಾವಿಬ್ಬರಗಲದೆಯೆ ಒಂದೆಡೆಯೊಳಿರುವವರು.
ಅವನಂತೆ ಬಹು ಜನರ ನಾ ಸದೆದು ಕೊಂದಿಹೆನು.
ನಾನಿಂತ ಕಣದೊಳಗು ಇದಿರಾಳು ಬದುಕಿಲ್ಲ.
ಎನ್ನೆದೆಯ ನೀ ನೋಡು! ಕೈಗಳಂ ನೋಡಯ್ಯ!
ಅಂಗಾಂಗವೆಲ್ಲವಿವು ಬಲಿದಿಹುವು ನೀ ನೋಡು.
ಎಳೆಯ! ಸಾಹಸವೇಕೆ! ಸಾಯಬೇತಕೆ ಬಗೆವೆ?
ಇಲ್ಲಿಹುದು ಬಿಸುಗಾಳಿ! ಮಸಣದೊಳು ತಂಗಾಳಿ!
ಇಲ್ಲಿ ಬಹು ಜನರಿಹರು; ಅಲ್ಲಿ ನೀನೊಬ್ಬನೇ: ೬೧೦
ಏರುಜವ್ವನದೊಡಲನೀಡಾಡಬೇಡವಯ್!

ಹೆತ್ತಿಹರ ಹೊಟ್ಟೆಯನು ನೀನುರಿಸಬೇಡವಯ್
ಮಣ್ಣು ಮುಕ್ಕುವ ನಿನ್ನನವರು ನೋಡಲೆ ಬೇಕೆ?"
ಎಂದು ರುಸ್ತುಮನೆನ್ನೆ ಪ್ರತಿವೀರನಿಗು ಆಗ
"ಯಾರಿವನು"? ಎಂದೆದೆಯು ತಳಮಳಿಸೆ, ಕಳವಳದೆ
ಸೊಹ್ರಾಬ ಮತ್ತೊಮ್ಮೆ ಕೈವಿಡಿದು ಕೇಳಿದನು.
"ಗಿರಿಯಂತೆ ಮಳಲೊಳಗೆ ನಟ್ಟು ನೀ ನಿಂತಿರುವೆ.
ಬಿಂಕಮಂ ಬಿಟ್ಟಿರುವ ಸಮ್ರಾಜನಂತಿರುವೆ.
ನನ್ನಾಣೆ, ನಿನ್ನಾಣೆ, ನೀನಾರು? ರುಸ್ತುಮನೊ?"
ಏನು ಮಾಡುವೆನೆಂದು ಯೋಚಿಪನು ರುಸ್ತುಮನು. ೬೨೦
"ನಿಂತು ನಾ ಕಣನೊಳಗೆ ಹಿಂದೆ ಹೋಗುವುದಲ್ಲ.
ಹೋದೊಡಂ ಬಾಲನಿವ ಹೆಮ್ಮೆಯನು ಕೊಚ್ಚುವನು.
ಮೆಲ್ಮಾತಿನಿಂದೆನ್ನ ಬಣ್ಣಿಸಲು ಬಗೆದಿಹನು."
ಎಂದಾಗ ಗುಹೆಯೊಳಿಹ ಕೇಸರಿಯ ಗರ್ಜನೆಯ
ಕೀಳ್ಗೆಯ್ವ ನುಡಿಯಿಂದ ನುಡಿದ "ಏನಿದು ವ್ರೀರ?
ಯಾರಿರಲಿ ಬರಲೆಂದೆ. ಈಗ ನೋಡುವೆ ಹಿಂದೆ.
ಪರಿಚಯವ ಪಡೆದುಕೊಳೆ ಸಂತೆಯೆಂದರಿತೆಯಾ?
ಪಾಠವನು ಕಲಿಯಲ್ಕೆ ಈಗಳಿದು ನಾಲೆಯೋ?
ರುಸ್ತುಮನು ಬಂದೊಡನೆ ಹಿಂದಕೋಡುವನಂತೆ!
ಮತ್ತಾರು ಬಂದರೂ ಯುದ್ಧಮಾಡುವನಂತೆ! ೬೩೦
ಹೊಗಳುವನು. ಬಗುಳುವನು. ಕೊಚ್ಚುವನು. ಕೊರೆಯುವನು.
ಕಾಳೆಗದ ಕಣದಲ್ಲಿ ನರ್ತಿಸಲು ನಿಂತಿಹೆಯ?
ಹೇಡಿ ಹೆತ್ತಳೆ ನಿನ್ನ? ಬಡಿವಾರವೇತಕ್ಕೆ?
ಹೊಣರುವೆಯೊ? ಹೋಗುವೆಯೊ? ಸೋತಿರಲು ಕಾಲ್ಗೆರಗು.
ದಳವೆರಡು ನೋಡಲ್ಕೆ. ಇಲ್ಲವಾದರೆ ನಿಲ್ಲು.
ಮೂಳೆಗಳ ಮುರಿಮುರಿದು ಮಳಲಲ್ಲಿ ಬೆರಸುವೆನು.
ನಾಯ್ಗಗಳಿಗೆ ನರಿಗಳಿಗೆ ನಿನ್ನೊಡಲ ಬಲಿಯಿಡುವೆ.
ಖಂಡಗಳ ತುಂಡುಗಳ ರಕ್ತಮೊಳು ತೇಲಿಸುವೆ.

ನೋಡೀಗ ತಡವಿಲ್ಲ. ಬಹು ಸುಳ್ಳ, ಸಮರಗಳ್ಳ—
ಕನಲಿ ಬೇಗುದಿಗೊಂಡು ಆಗೀತ ಹೇಳಿದನು. ೬೪೦
"ಬಿರುಮಾತ ಕೇಳ್ದೊಡನೆ ಗಡಗುಟ್ಟಿ ನಡುಗಲ್ಕೆ
ಎನ್ನನೆನ್ನಯ ತಾಯಿ ಹೆಣ್ಣೆಂದು ಹಡೆದಿಲ್ಲ,
ಎನ್ನ ಪಡೆದಿರುವಾತ ಮೂಲೋಕ ವಿಖ್ಯಾತ,
ನಿನಗಿಂತ ಶೂರನಯ್. ನಿಲ್ಲು ನಿಲ್, ನುಡಿಯದಿರು.
ನಾಲಗೆಯನೊಳಗೆಳೆದು ಆಯುಧವ ನೀ ತೆಗೆದು,
ಕಣಕಣಿಸು ಝಣಝಣಿಸು ಹೃದಯವುಕ್ಕೇರುವುದು.
ಗೆಲುವನಾರ್, ನಿಲುವನಾರ್, ಕಾಲಗತಿ ಕಾಣಿಸದು.
ತೆರೆಯ ಮೇಗಡೆ ತಂದ ಕಾಲಪುರುಷನೆ ನಮ್ಮ
ನಿರ್ಣಯವ ನೀಡುವನು ನಮಗೇಕೆ ಬಿರುಮಾತು"
ಎಂದೆನುತ ಸಜ್ಜಾಗಿ ಕೆರಳಿ ಕನಲಿಕೆಯಿಂದ
ಕುಸ್ತಿಗನುವಾಗಿ ನಿಲಲು— ೬೫೦

೨

ಹಾಯೆಂದು ತಡೆಗೈದು ಕುಸ್ತಿಯೊಳು ಕೈಗೊಟ್ಟು,
ರುಸ್ತುಮನು ನೂಂಕುವನು, ಆ ನಿಲ್ಕೆ! ಆ ತೋರ್ಕೆ!
ಆ ವರಸೆ! ಆ ಪಟ್ಟು! ಆ ವೆಟ್ಟು! ವಹವಹಹ
ರುಸ್ತುಮನೆ ಕಲಿಯಬೇಕು.
ತುಳುಕುವರು, ತೂಳುವರು; ತಿಳಿಯುವರು, ತಿಳಿಸುವರು.
ಕೈಗೊಟ್ಟು, ಕೈಬಿಟ್ಟು, ಮೇಲ್ವಾಯ್ದು, ಕೀಳ್ಗಿಯ್ದು,
ಹಿಸುಕುವರು, ಹಿಂಡುವರು, ಕುಸುಕುವರು, ಹಳಚುವರು.
ತಿರು ತಿರುಗಿ ಕಾಲ್ಗೊಟ್ಟು, ಗುಡುಗಾಡಿ, ಹೆಣಗಾಡಿ
ಕನಲುವರು, ಕೆರಳುವರು. ಮಗುಚುವರು, ಮುರಿಯುವರು.
"ಜೈಜೈ" ಎನ್ನುವರು ಎರಡು ಕಡೆಯುಲು ಭಟರು.
ಹಾರುವರು, ಹೇರುವರು. ಹೋರುವರು, ತೂರುವರು.
ಮುದ್ದಾಟ ಗುದ್ದಾಟವೆಂತಾದರಿದನೆನ್ನಿ. ೬೬೦

ಹೊಡೆವರ್‍ಬ್ಬೈ, ತಡೆವರ್‍ಬ್ಬೈ, ಸಮವೀರರಿಬ್ಬರೂ.
ಮೇಲಾರು? ಕೀಳಾರು? "ವಾಹ! ಸೊಹ್ರಾಬ್ ವಾಹ!"
ಎಂದೊಮ್ಮೆ ತಾರ್ತರರು ಕೂಗಿ ಕೊಂಡಾಡಿದರು!
ನೋಡಲ್ಕೆ ರುಸ್ತುಮನು ನೆಲಹತ್ತಿ ಬಿದ್ದಿದ್ದು
ತತ್ತರಿಸುತೇಳುವನು "ಹೇಡಿ ಹೆತ್ತಿಹ ಮಗನ
ನೋಡೆ"ಂದು ಎದೆಗೊಟ್ಟು ಸೊಹ್ರಾಬ ನಿಂತಿಹನು.
ಮತ್ತೆ ಕೇಳುತ್ತಿಹನು. "ಕೆಡೆದಿಹನ ನಾ ಹೊಡೆಯೆ.
ಕರುಣೆಯಂ ತೋರುವೆನು. ನೆಲದಿಂದ ಮೇಲೇಳು.
ಎಲೆ ವೀರ, ಸೋತಿರುವೆಯೆಂದಾನು ಕಡೆಗಣಿಸೆ.
ಹಿರಿಯನಲಿ ಗೌರವವ ಸಹಜದಿಂ ತೋರುವೆನು. ೬೭೦
ನಿಜವ ನುಡಿ ನೀನಾರು? ಮರುಕವುಂಟಾಗುತಿದೆ.
ಯುದ್ಧವಿಂದಿಗೆ ಸಾಕು. ರುಸ್ತುಮನೊ? ಮತ್ತಾರು?
ಆಗಲ್ಕೆ, ರುಸ್ತುಮನ ಕಥೆಗಳನು ನೀ ಹೇಳು.
ಸಾಹಸವನುಳಿದೀಗ ಎಲ್ಲಿ ಕುಳಿತಿಹನವನು?
ಶಾಂತತೆಯು ಬೆರೆದಿರಲು ಶೌರ್ಯವದು ಭೂಷಿಪುದು,
ಉರಿಬಿಸಿಲು ಸೂರ್ಯನಿಗು ಬೇಡವಾಗುವುದುಂಟು.
ಕಥೆ ಹೇಳು," ಎನ್ನುತಿರಲು—
ಕುದಿಯುತಿಹ ಕೋಪದೊಳು ಮೇಲೆದ್ದು ರುಸ್ತುಮನು,
ಕತ್ತಿಯನು ಹಿರಿಯುತ್ತ ಗೋಣೊಣಗಿ ನುಡಿಕಟ್ಟಿ,
ತುಟಿಯೆರಡು ನಡುಗುತಿರೆ ಬಿಸುಮಾತನುಸಿರಿದನು.
"ಆರಾಮದೌತಣದ ನೋಟದಾಟವಿದಲ್ಲ. ೬೮೦
ಇತ್ತರಿಸಿ ಕುತ್ತಿಗೆಯ, ಕೈಗಳಂ ಕಾಲ್ಗಳಂ
ಕತ್ತರಿಸಿ, ದೆಸೆದೆಸೆಗ ಚಲ್ಲಾಡಿ ಸೂಸಿಡುವ
ಕಾಳೆಗದ ಕಣವಿದ್ಕೈ. ಕರುಣೆಯಂ ಬಿಟ್ಟಿಹೆನು.
ನುಡಿಯಲ್ಲಿಯೆನ್ನನ್ನು ಉರಿಸುವೆಯ ನೋಡುವೆನು.
ಹೆಜ್ಜೆಯನು ಮುಂದಿಟ್ಟು ಹಿಂದೋಡ ಬಂದಿಲ್ಲ."
ಎಂದು ಕತ್ತಿಯನೆತ್ತಿ ಮುಂದೊತ್ತಿ ಬರುತಿರಲು,

ಸೊಹ್ರಾಬನಾಕ್ಷಣವೆ ಕತ್ತಿಯಿಂದಿದಿರಾಗಿ
ಹೊಡೆವುದಂ ತಡೆಯುತ್ತ ಹೊಡೆಯುತ್ತ ಹೊಯ್ದಾಡೆ,
ಖಣಿ ಖಣಿಲು ಖಣಿಲೆಂದು ಕತ್ತಿಕತ್ತಿಯು ಹೊಡೆಯೆ
ಗರಗಸಗಳಾದುವವು. ಸೋತುವಾ ಕತ್ತಿಗಳು. ೬೯೦
ಗದೆಯು ಕೊಂಡೊಡೆ ಆಗ "ಖಟ್ಟಖಟ್ಟನೆ" ವೊದಲು
"ಘಟ್ಟಘಟ್ಟನೆ" ನಡುವೆ "ಧುಮ್ಮಧುಮ್ಮನೆ" ಕೊನೆಗೆ
ನುಚ್ಚುನೂರಾದುವವು. ಭೂಮಿಭಾರದ ಗದೆಯು
ಈ ರೀತಿ ಪುಡಿಯಾಗೆ ಕೈಕಟ್ಟಿ ಬೆರಗಾಗಿ
ರುಸ್ತುಮನು ನೋಡಿದನು. ಸೊಹ್ರಾಬ ಮನದೊಳಗೆ
ಹೇಳಿಕೊಂಡನು ಆಗ "ಕಡುಗಲಿಯು ಇವನಾರು?
ರುಸ್ತುಮನ ಹೊರತಾಗಿ ಮತ್ತೊಬ್ಬನೀ ಪರಿಯ
ಗದೆಯು ಕೊಳ್ಳುವುದುಂಟೆ" ಇಂತೊಂದು ಕ್ಷಣಕಾಲ
ಕಳೆಯೆ, ಕೂಡಲೆ ಅವರು ಪರಶುವನು ಕೈಕೊಂಡ
ರೇವೇಳ್ವೆನದ ನಾನು. ನಿಲುಗಲ್ಲನಷೆಕಲ್ಲು ೭೦೦
ತಗುಲಿದಂತಿರುತಿತ್ತು. ಕವಚಗಳಲೊಮ್ಮೊಮ್ಮೆ
"ಛೀಙ್ ಛಿಣಿಲು ಛಿಣಿಲೆ"ಂದು ಛೀಂಕರಿಸುತಿರುತಿತ್ತು.
ಕೊಚ್ಚಿ ಕಡಿಕಡಿದಾಡಿ ಬೀಸಾಡಿ ಬಿಟ್ಟರದ.
ಒಂದು ಮತ್ತೊಂದೆನುತ ಕೊಂಡು ಕಾದಾಡುತ್ತ,
ವಿವಿಧ ಶಸ್ತ್ರಾಸ್ತ್ರಗಳ ಬಯಕೆಯನು ಸಲಿಸಿದರು.
ಮಸೆಯು ಕಾಣಿಸಿತಾಗ; ನರವು ತಲ್ಲಣಿಸಿತ್ತು.
ಗಾಯದಿಂ ನೆತ್ತರವು ಸೂಸಿ ಸುರಿಯುತ್ತಿತ್ತು.
ನೋಡುವರ ಕಣ್ಣುಗಳ ಕುಕ್ಕಿ ಕುದಿಸುತ್ತಿತ್ತು.
ಇಬ್ಬರೂ ಗೆದ್ದಿಹರು. ಇಬ್ಬರೂ ನೋತಿಹರು.
ಎಲ್ಲರೂ ಸೋತಿಹರು. ಹೆಜ್ಜೆಯನು ಹಿಂದಿಡಿಸಿ
ಇಬ್ಬರನು ಬಿಡಿಪರಾರು? ೭೧೦

ಕರುಣದಿಂ ರವಿಯಾಗ ಮೇಘಮಂ ಮರೆಗೊಂಡ.
ಬಿಸುಗಾಳಿ ಬಿರುಗಾಳಿ ಭಿರ್ರೆಂದು ಬೀಸುತ್ತ

ನುಣ್ಮಣಲ ಕಣಗಳನು ಎಲ್ಲೆಡೆಯೊಳೆರಚಿದುದು.
ಕಣ್ಮುಚ್ಚಿ ಜನರೆಲ್ಲ ಸಾಕೆಂದು ಸಾರಿದರು.
ಆದರೇನಿಬ್ಬರೂ ಹಠದಿಂದ ಕಾದಿದರು.
ರುಸ್ತುಮನು ಕಿಡಿಯಾಂತು, ಜ್ವಲಿಸುತಿರೆ ಕಣ್ಣುಗಳು
ಹೆಸರು ಹೇಳಲು ಬಾರದೆಂಬುದಿದ ತಾ ಮರೆತು,
ರೂಢಿಯಿಂ ಯುದ್ಧದೊಳು ಕೂಗಿಡುವ ತೆರದಲ್ಲಿ
ಭಲ್ಲೆಯವನೆತ್ತುತ್ತ "ನೋಡು ರುಸ್ತುಂ ಹೊಡೆತ
ನೋಡೆ"ಂದು ಎದೆಯೊಡೆವ ರೀತಿಯಲ್ಲಾರ್ಭಟಿಸೆ, ೭೨೦
ಸೊಹ್ರಾಬ ಬೆರಗಾಗಿ "ಬಂದನೇ ರುಸ್ತುಮನು,
ಎಲ್ಲಿ ರುಸ್ತುಮನೆ"ಂದು ವಿಭ್ರಾಂತನಾಗುತ್ತ
ಹೆಜ್ಜೆಯನು ಹಿಂದಿಟ್ಟು ಹೊಡೆತಡೆವ ಕೈಗಳಂ
ಕೆಳಗಿಳುಹಿ ನಿಲ್ಲುವನೊ, ನಿಲ್ದಪನೊ, ನಿಂತನೋ,
"ರುಸ್ತುಮೆ"ಂಬಸ್ತ್ರರೊಳು ಎದೆಯ ನಾಟಿತು ಭಾಲೆ.
ರುಧಿರವನ್ನುಗುಳಿಸಿತು. ಕುವರನಂ ಕೆಡಹಿಸಿತು.
ಮರಣದಾಯಕವಾದ ಘಾತದಿಂ ನೆಲಕುರುಳಿ,
ಹಾಯೆಂದು ಸೊಹ್ರಾಬ ಕೂಗಿಡಲು, ದಿಕ್ಕೆಲ್ಲ
ಕೂಗಿಡುವ ತೆರದಿಂದ ಹಾ ಕುವರ! ಹಾ ಕಂದ!
ಹಾಯೆಂದರಲ್ಲಿರುವರೆಲ್ಲಾ.

೩

ಛಲದ ನಗೆಯೊಳು ಆಗ ರುಸ್ತುಮನು ಹೇಳಿದನು. ೭೩೦
"ವೀರನೊಬ್ಬನ ಕೊಂದು ಗೆದ್ದೆನೆಲ್ಲರ ಎಂದು
ಬೇಟೆಯನು ಬೆನ್ನಮೇಲಿಟ್ಟು ಕೊಂಡೈದುವೆಯ?
ದೊರೆಯ ನೀಂ ನೋಡುವೆಯೊ? ಮುಸುಕಿಕ್ಕಿಕೊಳ್ವೆಯೋ?
ಜಂಬವದು ಜಾರಿತೇ? ಬಿಂಕವದು ಬಯಲಾಯ್ತೆ?
ಬರಿಸು ತಾಯ್ತಂದೆಗಳನು".
ನಿರ್ಭಯದ ನುಡಿಯಿಂದ ಸೊಹ್ರಾಬ ಹೇಳಿದನು.

"ಪರಿಹಾಸ ಗೆಯ್ಯುವೆಯ? ಎಲೆ ಪಾಪಿ ಖೋಡಿಯೇ,
ರುಸ್ತುಮನ ಹೆಸರಿಂದೆ ಭ್ರಾಂತನಾದೆನು ನಾನು.
ಆ ಹೆಸರ ಹೇಳದೆಯೆ ನೀನೆಂತು ಗೆಲುತಿದ್ದೆ?
ಎಷ್ಟು ಹೊತ್ತೆನ್ನೊಡನೆ ಹೋರಾಡುತಿರುತಿದ್ದೆ?
ಒಂದು ಪೆಟ್ಟಿಗೆ ನಿನ್ನ ಹೋಲುವರು ಹತ್ತು ಜನ ೨೪೦
ಬಂದೊಡಂ ಬೆದರುವೆನೆ? ಬಿಡುತಿದ್ದೆನೇ ನಾನು?
ಕೈಯ್ಯ ಕೆಳಗಿಟ್ಟಾಗ ನನ್ನ ನೀ ಹೊಡೆದಿರುವೆ.
ಮೋಸದಿಂದಲಿ ಕೊಂದೆ! ತಂದೆ ಹೆಸರಲಿ ಕೊಂದೆ!
ನೀಚತನದಿಂದ ಕೊಂದೆ."
ನೆರೆದವರು ಕೇಳಿದರು. ರುಸ್ತುಮನು ಕೇಳಿದನು.
ಬೆದರುಗೊಂಡಿತು ಬಗೆಯು. ಆದೊಡಂ ಚಿಂತಿಪನು.
"ನನಗೆಲ್ಲಿ ಮಗ ಬಂದ? ರುಸ್ತುಮನ ಮಗನೆಂದು
ಹೇಳಿಕೊಳ್ಳೆಂದೆನುತ ಇವನ ತಾಯ್ ತಿಳಿಸಿದಳೊ?
ಇವನೆ ಹೇಳುತ್ತಿಹನೊ? ಇರಬಹುದು, ಹೇಳುವರು—
ಶೌರ್ಯ ಸಾಹಸಕೆನ್ನ ಹೆಸರ ಹೇಳುವುದುಂಟು."
ಎಂದು ರುಸ್ತುಮ ಬಗೆಯೆ, ಸೊಹ್ರಾಬ ಹೇಳಿದನು. ೨೫೦
"ತೊಲಗೆಲೈ ಖೂಳ! ನಿನ್ನೊಬ್ಬನೇ ಮಗನನ್ನು
ಕೊಂದು ಬಂದಿಹೆನೆಂದು ರುಸ್ತುಮಗೆ ನೀ ತಿಳಿಸು.
ಅವಗಾಗಿ ನಾನೀಗ ಅಷ್ಟಾಗಿ ಚಿಂತಿಸೆನು.
ಕೆನ್ನೆಯಲಿ ಕೈಯಿಟ್ಟು 'ಮಗನು ಬಂದಪನೆ'ಂದು
'ತಂದೆಯನು ಕೈವಿಡಿದು ಕರೆದು ತಂದಪನೆ'ಂದು,
'ಆ ಇಬ್ಬರನು ನಾನು ಎಂದು ನೋಡುವೆನೆ'ಂದು,
ಅಮ್ಮನಳಲುವಳಲ್ಲಿ. ಹಾ ಅಮ್ಮ, ತಾಹಮಿನೆ,
ಮಗನ ಮರೆಯೌ ತಾಯಿ, ಬಾರನವ, ಬಾರನವ!
ಕಣದಲ್ಲಿ ಕಪಟದಿಂ ಪಾಪಿಯೊಬ್ಬನು ಮಗನ
ಕೊಂದು ಹಾಕಿದನೆಂದು ತಂದೆಯೊಳು ನೀ ಹೇಳು." ೨೬೦
ಕಣ್ಣೆದರಿ ಕೆಂಪಾಗೆ ರುಸ್ತುಮನ ನೋಡುತ್ತ

"ಎಲ್ಲಡಗುವೈ ಪಾಪಿ? ಸಾಗರದಿ ಮುಳುಗಿದರು,
ಆಗಸದಿ ತೇಲಿದರು, ಮಗನ ಮೋಸದಿ ಕೊಂದ
ನೀಚನಂ ಹಿಡಿತಂದು ರುಸ್ತುಮನು ಕೊಲದಿಹನೆ?"
ಕೇಳಿದನು ರುಸ್ತುಮನು. ಅಂದು ತನ್ನಯ ಕುದುರೆ
ತಪ್ಪಿಹೋದುದ ನೆನೆದನಲ್ಲಿಂದ ನೆರೆಯೂರಿ
ಗೈತಂದುದಂ ಸ್ಮರಿಸಿ, ತಾಹಮಿನೆಯಂ ಬಗೆದ.
ಬಹುರಮ್ಯವಾಗಿದ್ದ ಯೌವನದ ಸವಿಗನಸ
ತಿರುಗಿ ತಂದನು ಮನಕೆ. ಆದರೇಂ ತಾಹಮಿನೆ
ಹೆಣ್ಣ ಹಡೆದಿಹಳೆಂದು ಮನವ ಸಂತೈಸುವನು. ೭೭೦
ಈ ಕುವರನಾರಿವನು? ನಮ್ಮಿಬ್ಬರನ್ನೇಕೆ
ಹೆಸರ ಹೇಳುತ್ತಿಹನು! ಎಂದು ಚಿಂತಿಸುತಿಹನು.
ಆಗ ನೋವತಿಯಾಗಿ ಸೊಹ್ರಾಬ ಚೀರಿದನು.
ಕೆಡೆದೆ ಹಾ 'ರುಸ್ತುಂ,' ಕೆಡೆದ ನಿನ್ನಯ ಪುತ್ರ!
ಎಲ್ಲಿರುವೆ? ಬಾ ಬೇಗ. ಒಮ್ಮೆ ನಾ ನೋಡುವೆನು.
ಅರಸರಸಿ ಬೇಸತ್ತು ಬಳಲಿ ಬೆಂಡಾಗಿಹೆನು.
ಹೃದಯ ಸಂತಾಪವನು ನೀ ಶಮಿಸು. ಎಲ್ಲಿರುವೆ.?
ಶೂಲವನು ನೀನೆಳೆದು ಸುರಿವ ರಕ್ತವ ನೋಡು.
ವೀರ ಭೂಷಣವಾಂತ ನಿನ್ನ ಮಗನನು ನೋಡು.
ನಿನ್ನ ನೋಡುವ ಸಮಯವಿನ್ನು ನನಗೆಲ್ಲಿಹುದು? ೭೮೦
ಸುತನ ನೋಡುವ ಕಾಲ ನಿನಗು ಬಾರದು ಇನ್ನು.
ಎನ್ನ ಮಿತ್ರರೆ ಹೋಗಿ ರುಸ್ತುಮನ ಕರೆತನ್ನಿ.
ನಾನೊಮ್ಮೆ ನೋಡುವೆನು ಹರಣವನು ನೀಗುವೆನು."
ರುಸ್ತುಮನು ಕೇಳಿದನು. ಹತ್ತಿರಕೆ ಸಾಗಿದನು.
"ಹಲವು ಹಂಬಲವೇಕೆ? ಮಗುವೆ, ರುಸ್ತುಮ ನಾನು.
ಪಾಪಿಯೆನ್ನುತ ನೀನು ಯಾರ ನಿಂದಿಸುತಿಹೆಯೊ,
ಆತನೇ ನಾನೆಲೈ ನಿನ್ನೆದೆಯನಿರಿದವನು.
ಈ ಹೆಸರ ನೀ ಮರೆತು ನಿನ್ನ ತಂದೆಯ ಸ್ಮರಿಸು.

ನನಗಿಂತ ಶೂರನವ ದಿಟವು. ನೀನವನ ನೆನೆ.
ದೇವನನು ನೀ ನೆನೆಯೊ. ಪಾಪಿ ಹೆಸರಿದು ಬೇಡ"
ಎಂದೆನ್ನಲಾಕ್ಷಣದೊಳು— ೭೯೦
ವೇದನೆಯ ಕಡೆಗಣಿಸಿ ಸೊಹ್ರಾಬನೆಚ್ಚತ್ತು,
'ರುಸ್ತುಂ–ರುಸ್ತುಮೆ'ಂದೇಳುತ್ತ, ಎದೆಯಲಗ
ಕಿತ್ತೆಸೆದು ಕೈಗಳಂ ನೀಡಿದನು. ತಂದೆಯನು
ಬಾಚಿ ಮುದ್ದಾಡಿದನು. "ರುಸ್ತುಮೆನ್ನಯ ಪಿತನು.
ನೀನೆನ್ನ ಪಿತನೆ"ಂದು ಕೊರಳ ಕಟ್ಟಿದನಂದು.
"ನೀನೆ ರುಸ್ತುಮನೆಂದು ಎನ್ನೆದೆಯು ಸಾರಿತ್ತೈ.
ಹಾ ತಂದೆ, ನಿನ್ನ ನಾಂ ಹೊಡೆದೆನೇ, ಬಡಿದೆನೇ,
ಕೆಡುನುಡಿಯ ನುಡಿದೆನೇ? ಮಗನ ಮನ್ನಿಸು ತಾತ,
ರುಸ್ತುಮನ ಮಗ ನಾನು. ನಾ ನಿನ್ನ ಮಗನೆ"ಂದು
ಅಳಲಿ ಗೋಳಿಟ್ಟನಾಗ.—
ಕಲ್ಲೆದೆಯು ಕರಗಿದುದು. ಕಟ್ಟಿ ಹೋದುದು ಮಾತು. ೮೦೦
ಅವನನ್ನು ಮತ್ತಲ್ಲಿ ಮಲಗಿಸುತ ರುಸ್ತುಮನು,
ಹರಿವ ರಕ್ತದೆ ನೆನೆದ ಕವಚವನು ಸಡಿಲಿಸುತ,
ಒತ್ತಾಯದಿಂ ನುಡಿದ "ಎಲೆ ಕಂದ, ಮರುಗದಿರು.
ಮಗನ ಮೇಲಣ ಮಮತೆ ನಿನ್ನೊಳಾಗುವುದೆನಗೆ.
ಆದರೇಂ ತಾಹಮಿನೆ ನಿನ್ನಂಥ ವೀರನನು
ಪಡೆದಿಲ್ಲ ಪಡೆದಿಲ್ಲವೆ"ಂದ.
ತಾಯ ನೆನೆಯುತ್ತಾಗ ಸೊಹ್ರಾಬ ಹೇಳಿದನು.
"ಸುಳ್ಳ ಕಳಿಸಿದಳವಳು. ಇಲ್ಲಿ ಬಿದ್ದಿರುವೀತ
ನೀತನೇ ನಿನ್ನ ಸುತ. ಗಳಿಗೆಯಲಿ ಸಾಯುವವ
ಸುಳ್ಳಾಡಿ ಬದುಕುವನೆ? ಸುಳ್ಳನೆಂದಿಗು ಹೇಳೆ.
ನನ್ನ ತಾಯ್ ತಾಹಮಿನೆ ಕೊರಳಲ್ಲಿ ಕಟ್ಟಿಹಳು; ೮೧೦
ನನ್ನೆದೆಯಮೇಲಿರುವ ಈ ಪದಕವನು ನೋಡು.
ಅಂಕಿತದ ಪದಕವಿದು ನಿನ್ನದಲ್ಲವೆ ನೋಡು.

ಇನ್ನಾದರೆನ್ನನ್ನು ಮಗನೆಂದು ನೀ ಹೇಳು.
ಎತ್ತಿಕೊಳ್ಳೈ ಮಗನ. ಮಗನ ಮನ್ನಿಸು ತಾತ"
ಎಂದು ಕಣ್ಣೀರ್ವಿಡುತ 'ಮಗನ ಮರೆ, ಮರೆತುಬಿಡು,
ಮರೆಯಮ್ಮ', ಎನ್ನುತಿರಲು—
ಬರಸಿಡಿಲು ಬಡಿದಂತೆ ಬಿಸುಸುಯ್ದು ರುಸ್ತುಮನು
ಪದಕವನು ನೋಡಿದನು. ಕೆನ್ನೆಯೊಳು ಕೆಂಪಳಿದು,
ಕಂಗಳಲಿ ನೀರೊಗೆದು ಎದೆ ಬಡಿದು ನೆಲಕುರುಳಿ
"ಹಾ ಕಂದ! ಹಾ ರತ್ನ! ಗುಣನಿಧಿಯೆ! ಕುಲಮಣಿಯೆ!
ಸುಳ್ಳಲ್ಲ. ಅಂಕಿತದ ಪದಕವಿದು ನನ್ನದೈ. ೮೨೦
ಎನ್ನೊಡಲ ತೊಡಿಗೆಯನು ನಾನೆ ಚಲ್ಲಾಡಿದೆನೇ?
ಮನಮುಗ್ಗ ಮುರಿದಿಟ್ಟು ಹಿಸುಕಿ ನಾ ಹಿಂಡಿದೆನೆ?
ತಾಹಮಿನೆ ನೀನೇಕೆ ಮೋಸಮಾಡಲು ಬಗೆದೆ?
ಆವ ದ್ರೋಹವ ನಿಮಗೆ ನಾ ಬಗೆದೆ ತಾರ್ತರರೆ?
ಈ ವೀರ ಪುತ್ರನನು ಕೊಲಲು ಕಳುಹಿಸಬಹುದೆ?
ಮಕ್ಕಳಿಲ್ಲವೆ ನಿಮಗೆ? ಕರುಳು ಕೊರೆಯದೆ ಹೇಳಿ.
ಹಾಲ ಹಸುಳೆಯನು ಎನ್ನಿಂದ ಕೊಲಿಸಿದಿರಿ.
ಈಗೇನು ಸಾಮ್ರಾಜ್ಯ ಸಂಪದವು ಬಂದಿಹುದು?
"ತಾಯ ತೊಡೆಯನು ತ್ಯಜಿಸಿ ಕಂದ, ಏತಕೆ ಬಂದೆ?
ಕಾಲನಂ ಕೂಡಲ್ಕೆ ಕಳುಹಿದಳೆ ಆ ತಾಯಿ? ೮೩೦
ನಿನ್ನ ಮುಂದಕೆ ಬಿಟ್ಟು ಹಿಂದುಳಿದ ಪಾಪಿಗಳ
ನಂಬಿದೆಯ ಮಗುವೆ ನೀಂ? ರುಸ್ತುಮನ ಮಗನೆಂದು
ಒದರದೇತಕೆ ನಿಂದೆ? ಬಾಯ ಕಟ್ಟಿದರಾರು?
ಮರವೆಯೇತಕೆ ಬಂತು? ತಾಯಿ ಪೃಥ್ವೀ ದೇವಿ,
ಇವನೆನ್ನ ಮಗನೆಂದು ನಿನಗೆ ಗೊತ್ತಿಲ್ಲವೇ?
ಸೂರ್ಯ, ನೀನರಿಯೆಯಾ? ನಿನ್ನಂತೆ ಉರಿವವನ
ಸಹಿಸದೆಯೆ ಕೊಲ್ಲಲ್ಕೆ ನೀನು ಸೇರಿರುವೆಯೋ?
ಕಂದನಂ ಕೊಂದ ಎನ್ನೊಡಲ ಸುಡು, ಸುಡು ಬೇಗ.

"ಆಡಿಸಲು ನಾನಿಲ್ಲ. ಉಣಿಸುವಾಗಳು ಇಲ್ಲ.
ಓಡಿ ಕುಣಿದಾಡುತಿರೆ ಮುದ್ದಾಡಲಿರಲಿಲ್ಲ. ೮೪೦
ನನ್ನನೇತಕೆ "ತಂದೆ ತಂದೆ" ಯೆನ್ನುವೆ ಕಂದ?
ಶಿಶುವ ಕೊಲ್ಲಲು ಬಂದ ಹಂದೆಯಲ್ಲವೆ ನಾನು.
ಘಾತಕನು ಪಾತಕನು ನುಡಿಸಬೇಡೈಯೆನ್ನ.
ಮರೆಯಿಸೌ ಭೂಮಾತೆ, ಶರಣೆಂದು ಬೇಡುವೆನು.
ಹೊಳೆಯೆ, ನಿನ್ನಂ ಕೂಡಿ ಹರಿಯುವೆನಿಗೋ ಬಂದೆ.
ಬಂಡೆಗಳೆ ನೀವೆನ್ನ ಮಂಡೆಯನು ಒಡೆಯಿರೈ.
ಖಂಡವನು ಸುಗಿಯಿರೈ ಮೊಸಳೆಗಳೆ, ಮೀನುಗಳೆ,
ತರಿಯಿರೈ, ಅರಿಯಿರೈ. ಕೆಟ್ಟೆ ಹಾ! ಹಾ!"ಯೆಂದು
ಮೂರ್ಚೆಯಿಂ ಮೈ ಮರೆದನು.

೪

ಚಿತ್ರದಲಿ ಬರೆದಂತೆ ಎಲ್ಲರೂ ನಿಂತಿಹರು.
ಸಾಯುತಿಹ ಸುತನಾಗ ಪಿತನ ಸತ್ಕರಿಸಲ್ಕೆ ೮೫೦
ತೋಳ್ಗಳನು ನೆಗಹುವನು. ಏಳಲಣಿಯಾಗುವನು.
ಅನಿತರೊಳು ವೇದನೆಯು ಅತಿಯಾಗುತುರುಳುವನು.
ಬೇಡ ಬೇಡೈಯೆಂದು ಜನರೆಲ್ಲ ಮರುಗಿದರು.
ಕಣ್ಣೀರ ಸುರಿಸಿದರು. ರುಸ್ತುಮನು ಎಚ್ಚತ್ತು,
"ಕಂದ, ಶ್ರಮಿಸುವೆಯೇಕೆ? ಮಣ್ಣ ಕೂಡಿಸಲೆಂದೆ
ಇಂದು ಬಂದಿಹೆ ನಾನು. ಎನ್ನ ಈಯೆದೆ ಕಲ್ಲು"
ಎಂದೆದೆಯ ಬಡಿಯುತ್ತ ಹಾಯೆನ್ನುತಳಲುತಿರೆ,
ಗಳಗಳನೆ ಕಣ್ಣೀರ ಕಾಲುವೆಯ ಹರಿಸುತ್ತ
ಸೊಹ್ರಾಬನಿಂತೆಂದನು—
"ಮಿಂಚಿನಂದದಿ ಬಂದೆ. ಗಾಳಿಯಂದದಿ ನಡೆವೆ.
ತಂದೆ ದುಃಖಿಸಬೇಡ. ನಿನ್ನಳಲು ನನ್ನನ್ನು ೮೬೦
ಮಿತಿಮೀರಿ ನೋಯಿಪುದು. ನೀನೀಗ ಸುಮ್ಮನಿರೆ

ನಿಶ್ಚಿಂತೆಯಿಂದಾನು ಜೀವವನು ತ್ಯಜಿಸುವೆನು.
ತಪ್ಪು ನಿನ್ನದು ಅಲ್ಲ. ಮತ್ತದಾರದು ಅಲ್ಲ.
ದೈವವಿಂತಾಗಿಸಿತು. ಏನೊಂದು ಆಸೆಯೂ
ನನಗಿಲ್ಲ. ತಂದೆಯನು ಅರಸಿದೆನು. ವೀರನಂ
ವೀರನಾಗರಸಿದೆನು. ಈಗೆನ್ನ ಸಂತೈಸು.
“ಅಳಲಬೇಡಳಬೇಡ. ನರೆಗೂದಲಜ್ಜನನು
ನೋಡುವಾಶೆಯು ಇಲ್ಲ. ಆದರವನಿಗೆ ತಿಳಿಸು
‘ರುಸ್ತುಮನ ಜೊತೆಯಲ್ಲಿ ಗೊತ್ತಿಲ್ಲದಿದಿರಾಂತು
ಕಾದಾಡಿ ಮಡಿದವನು ನಿನ್ನ ಮೊಮ್ಮಗ’ನೆಂದು. ೮೭೦
ಇನ್ನು ಯೋಚನೆಯಿಲ್ಲ. ಷೆಯ್ಸ್ತಾನಮಂ ನೆನೆಯೆ.
ಅಲ್ಲಿರುವ ಅರಮನೆಯ, ಆ ನಿನ್ನ ಬಿಡದಿಯನು,
ಆ ಊರ ಹೊಳೆಯನ್ನು, ಫಲವಿಡಿದ ನೆಲವನ್ನು
ಯಾವುದನು ನಾನೆನೆಯೆ. ಆದರೀ ರುಸ್ತುಮನ
ಒಡೆತನವ ಪಡೆದಿರುವ ಪುಣ್ಯಭೂಮಿಯೊಳೆನ್ನ
ದೇಹವಿದು ಹುದುಗಿರಲಿ. ಅಲ್ಲಿ ನನಗಾಗೊಂದು
ಎತ್ತರದ ಗೋಪುರವ ತಂದೆ, ನೀ ಕಟ್ಟಿಸಿಡು.”
(ಅನಿತರೊಳು ಕಣ್ಣೀರು ದಡಗುಟ್ಟಿ ಸುರಿಯುತಿರೆ,)
“ನಾನೊಬ್ಬಳನು ನೆನೆವೆ. ಅವಳನೆಂದಿಗು ಮರೆಯೆ.
ತಾಯಿಯೊಬ್ಬಳೆ ಅಲ್ಲಿ ಇಬ್ಬರನು ನೆನೆಯುವಳು. ೮೮೦
ನನ್ನ ಯುದ್ಧದ ಬಗೆಯನವಳು ತಿಳಿಯಲಿ ತಾತ.
“ಕಡೆ ನುಡಿಯ ನುಡಿಯುವೆನು. ನನಗಾಗಿ ಯಾರನ್ನು
ವಧಿಸಬೇಡೆಲೆ ತಂದೆ, ತಾರ್ತರರು ಪಾರ್ಶಿಕರು
ಎಲ್ಲರೊಂದಾಗಿರಲಿ. ನನ್ನ ಪ್ರಾಣವೆ ಅವರ
ವೈರವನು ಮರೆಯಿಸಲಿ, ಪ್ರೇಮವನು ಬೆಳೆಯಿಸಲಿ.”
ಎಂದೊರಗಿ ನೋವಿನಿಂ ಹಾಕಾರ ಗುಟ್ಟುತಿರೆ
ಮೈದಡವಿ ಕೈವಿಡಿದು, ಸೆರೆಬಿಗಿದು ನುಡಿಕಟ್ಟಿ,
ತಳಮಳಿಸಿ ಗದ್ಗದಿಸಿ ರುಸ್ತುಮನು ಹೇಳಿದನು.

"ನಡೆಯಿಪೆನು, ನೀಹೇಳ್ವುದೆಲ್ಲವನು ನಡೆಯಿಪೆನು.
ಚಕ್ರದಿಂದೆನ್ನೆದೆಯನರಿಯಬೇಡಿದು ಸಾಕು. ೮೯೦
ಸೋತಿಹೆನು, ಸೊರಗಿಹೆನು, ಸುಣ್ಣವಾಗಿರುವೆನ್ನೈ.
ನನಗೇಕೆ ಯುದ್ಧವಿದು? ನನಗೇಕೆ ವಿಜಯವಿದು?
ನಾನಿಲ್ಲಿ ಬಿದ್ದಿದ್ದು ನೀ ನುಡಿವ ನುಡಿಯನ್ನು
ನಾನೆ ನುಡಿದಿರಬಾರದಾಗಿತ್ತೆ? ಅಯ್ಯೊ ಹಾ!
ನನ್ನ ಘಾತಕತನವೆ! ನನ್ನ ದೌರ್ಭಾಗ್ಯವೇ!
ಅಯ್ಯೊ ಹಾ, ಹಾ" ಯೆನ್ನುತಿರಲು—
ಕೋಡಿಯಂದದಿ ರಕ್ತ ಸೂಸಿ ಸುರಿಯುತ್ತಿತ್ತು.
ಬಳಲಿದನು ಸೊಹ್ರಾಬ. ತೊಳಲಿದನು, ಹೊರಳಿದನು.
ಆಳಲಿದನು, ಚೀರಿದನು. ಹಾರಿ ಹಮ್ಮೈಸಿದನು.
ಹಾ ತಾಯಿ, ಹಾ ತಂದೆ, ಎಂದೊದರಿ ಮರುಗಿದನು.
ಆಗ ಕತ್ತಲೆ ಕವಿದು ಜನದ ಕಣ್ ಮಸಕಾಯ್ತು. ೯೦೦
ಸೊಹ್ರಾಬನೊಮ್ಮೆಯೇ ಮೇಲೆದ್ದು ತಂದೆಯನು
ಮತ್ತೆ ಬಿಗಿಯಪ್ಪಿದನು; ಮೇಣ್ ನೆಲದೊಳುರುಳಿದನು.
ಕರಣಗಳು ಬಳಲಿದುವು. ಜೀವದಾಸೆಯು ಹೋಯ್ತು.
ಜೀವವೂ ತೊಳಲಿದುದು; ಜೀವನವು ನಾಕಾಯ್ತು.
ಕಂದ ಹಾ!ಯೆಂದೆನುತ ತಂದೆ ಭೂಮಿಯೊಳುರುಳೆ
ಕಂದ ಕಣ್ಮುಚ್ಚಿದನು; ಕಣ್ಮುಚ್ಚಿದನು ಕಂದ.
ಕೆಚ್ಚೆದೆಯು ಕಪ್ಪಾಯ್ತು. ಕೆಂಬಿಸಿಲು ತಾ ಹೋಯ್ತು.
ಪಶ್ಚಿಮಕೆ ನೆರೆ ಸಾಗಿ ಸೂರ್ಯ ಕಣ್ಮರೆಯಾದ.
ಹಕ್ಕಿಗಳು ಹಾರಾಡಿ ಗೂಡಕೂಡಿದುವಾಗ.
ಮರುಗುತ್ತ ಕೊರಗುತ್ತ ದಳವೆರಡು ಸಾಗಿದುವು. ೯೧೦
ತಣ್ಣನೆಯ ಮಳಲಲ್ಲಿ ಗಾಳಿ ತಣ್ಣಗೆ ಬೀಸೆ,
ಮೇಲಿನಿಂ ತಣ್ಣನೆಯ ತುಂತುರುದುರುತ್ತಿರಲು,
ಆಗಸವು ಭೂಮಿಯೂ ದೆಸೆಗಳೂ ಎಲ್ಲವೂ
ತಣ್ಣಗಾದುವು ಆಗ. ತಾರೆಗಳು ಮಿನುಗಿದುವು.

ಚಂದಿರನು ಹುಟ್ಟಿದನು, ದಿಕ್ಕುಗಳು ಬೆಳಗಿದುವು.
ಹರಿದುಹೋದುದು ಹೊಳೆಯು. ಹರಿದುಹೋದುದು ಕಾಲ.
ಕಾಲದೊಡನೀ ಜಗಂ ನಿಯಮಮಂ ಮೀರದೆಯೆ
ಮುಂಬರಿದು ನಡೆದುದಂದು

* * * *

ಸಾವಿರದೆ ಸಾವಿರದೆ ವರ್ಷಗಳು ಕಳೆದಿಹುವು.
ತಪ್ಪದೆಯೆ ಆ ಹೊಳೆಗೆ ವರುಷವೂ ನೆರೆಬಂದು
ಹರಿದುಹೋಗುತ್ತಿಹುದು. ಆಗಿದ್ದ ಆ ಮಳಲು ೯೨೦
ಈಗಿಲ್ಲದಿರಬಹುದು. ಆದರೇನಾ ದಿನದೆ
ಅದರಲ್ಲಿ ರಕ್ತದಿಂ ಬರೆದಿರುವ ಅಕ್ಷರವು
ಈಗಲೂ ಅಳಿಸಿಲ್ಲ. ಮುಂದೆಯಳಿಸುವುದಿಲ್ಲ.
ಬದುಕಯ್ಯ ಬಹುಕಾಲ ಬಾಲಕನೆ, ಈ ನಿನ್ನ
ಹೆಸರು ಬಹುಕಾಲವಿರಲಿ.

---

# ಕಾವ್ಯಾಲಯದ ಪ್ರಕಟನೆಗಳು

## ಕಥೆ, ಕಾದಂಬರಿ, ಚಿತ್ರಗಳು :

| | | | ರೂ. | ಆ. |
|---|---|---|---|---|
| ಆರು ಹಂಸಗಳು—ಗ್ರಿಮ್ ಸೋದರರು | .... | .... | ೦ | ೮ |
| ಇದ್ದರೂ ಇರಬಹುದು—ಎಸ್. ಜಿ. ಶಾಸ್ತ್ರಿ | ...... | .... | ೨ | ೪ |
| ಇಂದ್ರವಜ್ರ—ಡಿ. ವಿ. ಜಿ. | ...... | .... | ೦ | ೧೩ |
| ಈಸೋಪನ ನೀತಿ ಕಥೆಗಳು (ಸಚಿತ್ರ)—ಆನಂದ | | ..... | ೨ | ೮ |
| ಗೋರ—ರವೀಂದ್ರನಾಥ ಠಾಕೂರ್ | .... | .... | ಅಚ್ಚಿನಲ್ಲಿ | |
| ಗೌರಿಯ ಮದುವೆ (ಕಿರುಕಾದಂಬರಿ)—ಸಿ. ಕೃಷ್ಣ | | .... | ೧ | ೪ |
| ಚಂದ್ರನನ್ನು ತಂದರು—ಗ್ರಿಮ್ ಸೋದರರು | .... | .... | ೦ | ೮ |
| ದೇಶವೇ ಅವರ ತಾಯಿ—ಹೊಯಿಸಳ | .... | .... | ೧ | ೪ |
| ಧ್ವಜರಕ್ಷಣೆ—ಪು. ತಿ. ನರಸಿಂಹಾಚಾರ್ | ...... | .... | ೧ | ೩ |
| ನನ್ನ ಅಪ್ಸರೆ ಮತ್ತು ಮುಗುದೆಯರ ಪತ್ರಗಳು—ಸಿ. ಕೃಷ್ಣ | | .... | ೨ | ೩ |
| ನಿರಾಶ್ರಿತೆ—ಎಚ್. ವಿ. ಸಾವಿತ್ರಮ್ಮ | .... | .... | ೧ | ೧೨ |
| ನೀತಿ ಚಿಂತಾಮಣಿ : ಭಾಗ ೧—ಎಂ. ಎಸ್. ಪುಟ್ಟಣ್ಣ | | ...... | ೦ | ೧೪ |
| ನೀತಿ ಚಿಂತಾಮಣಿ : ಭಾಗ ೨— ,, | | .... | ೦ | ೧೦ |
| ನೀತಿ ಚಿಂತಾಮಣಿ : ಭಾಗ ೩— ,, | | .... | ೦ | ೧೪ |
| ನೀತಿ ಚಿಂತಾಮಣಿ : ಭಾಗಗಳು ೧, ೨, ೩ (ಬಿಳಿಯ ಕಾಗದದ ಪ್ರತಿ) | | | ೩ | ೨ |
| ನೌಕಾಘಾತ—ರವೀಂದ್ರನಾಥ ಠಾಕೂರ್ | ...... | ...... | ೧ | ೪ |
| ಪತಾಕ್ಷಿ—ಹೊಯಿಸಳ | .... | .... | ೧ | ೪ |
| ಪುಟ್ಟರಸು—ಹೊಯಿಸಳ | ...... | ...... | ೧ | ೦ |
| ಫೋರಿ—ಹೊಯಿಸಳ | .... | .... | ೦ | ೫ |
| ಪ್ರೇಮಪ್ರಕರಣ—ಶಂಕರ | .... | .... | ೧ | ೫ |
| ಬೆಕ್ಕೋಜಿ—ಡಿ. ವಿ. ಜಿ. | ...... | .... | ೦ | ೮ |
| ಬೆಸ್ತರ ಕರಿಯ—ಗೊರೂರು ರಾಮಸ್ವಾಮಿ ಐಯಂಗಾರ್ | | .... | ೨ | ೩ |
| ಭೂಗರ್ಭಯಾತ್ರೆ—ಅನು : ಎಂ. ಗೋಪಾಲಕೃಷ್ಣ ಅಡಿಗ | | .... | ೧ | ೧೨ |

| | | |
|---|---|---|
| ಮನೆ–ಜಗತ್ತು—ರವೀಂದ್ರನಾಥ ಠಾಕೂರ್ .... .... | ೧ | ೮ |
| ಮರುಮದುವೆ—ಎಚ್. ವಿ. ಸಾವಿತ್ರಮ್ಮ .... .... | ೧ | ೪ |
| ಮಲೆನಾಡಿನ ಚಿತ್ರಗಳು—ಕುವೆಂಪು .... .... | ೧ | ೧೨ |
| ಮಾಡಿದ್ದುಣ್ಣೋ ಮಹಾರಾಯ(ಕಾದಂಬರಿ)—ಎಂ. ಎಸ್. ಪುಟ್ಟಣ್ಣ | ೩ | ೦ |
| ಮೂಲಾನಕ್ಷತ್ರ....ಶೇಷನಾರಾಯಣ — .... | ೧ | ೪ |
| ರಥಸಪ್ತಮಿ ಮತ್ತು ಇತರ ಚಿತ್ರಗಳು—ಪು. ತಿ. ನರಸಿಂಹಾಚಾರ್ | ೧ | ೪ |
| ರಾಮಾಚಾರಿಯ ನೆನಪು—ಪು. ತಿ. ನರಸಿಂಹಾಚಾರ್ .... | ೧ | ೪ |
| ವಿನೋದಿನಿ—ರವೀಂದ್ರನಾಥ ಠಾಕೂರ್ ... .... | ೧ | ೮ |
| ಶಿವರಾತ್ರಿ.....ಗೊರೂರು ರಾಮಸ್ವಾಮಿ ಐಯಂಗಾರ್ .... | ೨ | ೪ |
| ಶ್ರೀಪತಿಯ ಕಥೆಗಳು—ಶ್ರೀಪತಿ .... .... | ೨ | ೪ |
| ಸುಮತಿ ಮದನಕುಮಾರರ ಚರಿತ್ರೆ—ಎಂ. ಎಸ್. ಪುಟ್ಟಣ್ಣ .... | ೩ | ೪ |
| ಹವಳದ ದ್ವೀಪ—ಅನು: ಎ. ಎನ್. ಮೂರ್ತಿರಾವ್ .... | ೧ | ೪ |
| ಹೂವಿನ ಹಾಸಿಗೆ—ಹೊಯಿಸಳ .... .... | ೧ | ೪ |

## ನಾಟಕಗಳು :

| | | |
|---|---|---|
| ಅಹಲ್ಯೆ (ಗೀತನಾಟಕ)—ಪು. ತಿ. ನರಸಿಂಹಾಚಾರ್ ...... | ೨ | ೪ |
| ಆಷಾಢಭೂತಿ—ಎ. ಎನ್. ಮೂರ್ತಿರಾವ್ .... .... | ೧ | ೦ |
| ಗೋಕುಲ ನಿರ್ಗಮನ (ಗೀತರೂಪಕ)—ಪು. ತಿ. ನರಸಿಂಹಾಚಾರ್ | ೧ | ೦ |
| ನನ್ನ ಗೋಪಾಲ (ಮಕ್ಕಳ ನಾಟಕ)—ಕುವೆಂಪು .... | ೦ | ೮ |
| ಬಿರುಗಾಳಿ—ಕುವೆಂಪು .... .... | ೧ | ೮ |
| ಮೂರು ನಾಟಕಗಳು—ಕುವೆಂಪು .... .... | ೧ | ೧೨ |
| ಯಮನ ಸೋಲು; ವಾಲ್ಮೀಕಿಯ ಭಾಗ್ಯ—ಕುವೆಂಪು .... | ೧ | ೦ |
| ರಾಕ್ಷಸನ ಮುದ್ರಿಕೆ—ತೀ. ನಂ. ಶ್ರೀಕಂಠಯ್ಯ ... (ಪ್ರತಿಗಳು ಮುಗಿದಿವೆ) | | |
| ವಿಕಟಕವಿ ವಿಜಯ (ರಾಜಕೀಯ ಪ್ರಹಸನ)—ಪು. ತಿ. ನರಸಿಂಹಾಚಾರ್ .... | ೨ | ೪ |
| ಶಬರಿ—ಪು. ತಿ. ನರಸಿಂಹಾಚಾರ್ .... .... | ೦ | ೮ |
| ಶೂದ್ರತಪಸ್ವಿ ಮತ್ತು ಬಲಿದಾನ—ಕುವೆಂಪು .... .... | ೧ | ೪ |

# ಕಾವ್ಯ ಗ್ರಂಥಗಳು

| | | | | |
|---|---|---|---|---|
| ಅನ್ತಃಪುರಗೀತೆ—ಡಿ. ವಿ. ಜಿ. | .... | ೩ | ೮ | ೦ |
| ಇರುವಂತಿಗೆ—ಕೆ. ಎಸ್. ನರಸಿಂಹಸ್ವಾಮಿ | .... | ೧ | ೪ | ೦ |
| ಉಮರನ ಒಸಗೆ—ಡಿ. ವಿ. ಜಿ. | .... | ೧ | ೧೨ | ೦ |
| ಉಯ್ಯಾಲೆ—ದ. ರಾ. ಬೇಂದ್ರೆ | .... | ೧ | ೧೨ | ೦ |
| ಐರಾವತ—ಕೆ. ಎಸ್. ನರಸಿಂಹಸ್ವಾಮಿ | .... | ೧ | ೪ | ೦ |
| ಕಟ್ಟುವೆವು ನಾವು—ಎಂ. ಗೋಪಾಲಕೃಷ್ಣ ಅಡಿಗ | .... | ೧ | ೪ | ೦ |
| ಕಥನ ಕವನಗಳು—ಕುವೆಂಪು | .... | ೧ | ೮ | ೦ |
| ಕನ್ನಡ ಋತುಸಂಹಾರ—ಎಸ್. ವಿ. ಪರಮೇಶ್ವರ ಭಟ್ಟ | .... | ೦ | ೧೨ | ೦ |
| ಕನ್ನಡ ಮೇಘ ಸಂದೇಶ—ಕುಕ್ಕೆ ಸುಬ್ರಹ್ಮಣ್ಯ ಶಾಸ್ತ್ರಿ | .... | ೦ | ೧೦ | ೦ |
| ಗದಾಯುದ್ಧ ಸಂಗ್ರಹಂ (ರನ್ನ)—ಸಂ: ತೀ. ನಂ. ಶ್ರೀ. | | ೩ | ೪ | ೦ |
| ಚಟಾಕಿ (ಮಕ್ಕಳ ಪದ್ಯಗಳು)—ಎಲ್. ಗುಂಡಪ್ಪ | .... | ೦ | ೮ | ೦ |
| ಚಂದುಮಾಮ (ಮಕ್ಕಳ ಪದ್ಯಗಳು)—ಹೊಯಿಸಳ | ... | ೦ | ೮ | ೦ |
| ಜೇನಾಗುವಾ ! (ಪ್ರೇಮಗೀತಗಳು)—ಕುವೆಂಪು | .... | ೧ | ೪ | ೦ |
| ದೀಪದಮಲ್ಲಿ—ಕೆ. ಎಸ್. ನರಸಿಂಹಸ್ವಾಮಿ | .... | ೧ | ೧೨ | ೦ |
| ಮಲೆದೇಗುಲ—ಪು. ತಿ. ನರಸಿಂಹಾಚಾರ್ | .... | ೧ | ೦ | ೦ |
| ಮಹಾ ಚುನಾವಣೆ—ಡಿ. ವಿ. ಜಿ. | .... | ೦ | ೪ | ೦ |
| ಮಂಕುತಿಮ್ಮನ ಕಗ್ಗ—ಡಿ. ವಿ. ಜಿ. | .... | ೨ | ೪ | ೦ |
| ವಸಂತ ಕುಸುಮಾಂಜಲಿ—ಡಿ. ವಿ. ಜಿ. | .... | ೦ | ೧೨ | ೦ |
| ಶಾರದಯಾಮಿನಿ—ಪು. ತಿ. ನರಸಿಂಹಾಚಾರ್ | .... | ೧ | ೦ | ೦ |
| ಶ್ರೀ ರಾಮಾಶ್ವಮೇಧಂ—ಮುದ್ದಣ | .... | ೩ | ೪ | ೦ |
| ಶ್ರೀರಾಮಾಶ್ವಮೇಧ ಸಂಗ್ರಹಂ— | .... | ಅಚ್ಚಿನಲ್ಲಿ | | |
| ಷೋಡಶಿ (ಪ್ರೇಮಗೀತಗಳು) | .... | ೧ | ೮ | ೦ |
| ಸಿದ್ಧರಾಮಚರಿತೆಯ ಸಂಗ್ರಹ (ಪ್ರಸ್ತಾವನೆ, ಟಿಪ್ಪಣಿ ಸಹಿತ) —ಸಂ. : ಡಿ. ಎಲ್. ನರಸಿಂಹಾಚಾರ್ | .... | ೨ | ೦ | ೦ |
| ಸಿರಿಬಾಯಿಸುಡಿ—ಪು. ತಿ. ನರಸಿಂಹಾಚಾರ್ | .... | ೦ | ೮ | ೦ |
| ಹೂವಾಡಿಗಿತ್ತಿ—ರಾಘವ | .... | ೦ | ೪ | ೦ |

**ಕಾವ್ಯಾಲಯ :: ಪ್ರಕಾಶಕರು :: ಮೈಸೂರು**